ಶ್ರೀರಾಮಕೃಷ್ಣಾಶ್ರಮ ಗ್ರಂಥಮಾಲಾ—೭

# ಸ್ವಾಮಿ ವಿವೇಕಾನಂದರವರ ಪತ್ರಗಳ ಕನ್ನಡದ ಅನುವಾದ

## ಪ್ರಥಮ ಭಾಗ


ಅನುವಾದಕ:

ನಂಗಪುರಂ ವೆಂಕಟೇಶಯ್ಯಂಗಾರ್





ಕ್ರಯ ೮ ಆಣೆ. ] [ ೧೯೩೧

# ಮುನ್ನುಡಿ.

ಸುವಿಖ್ಯಾತರಾದ ಶ್ರೀಮತ್ ಸ್ವಾಮಿ ವಿವೇಕಾನಂದರವರ ಪತ್ರಗಳಲ್ಲಿ ಕೆಲವು ವಂಗ ಭಾಷೆಯಲ್ಲಿಯೂ ಉಳಿದುವು ಆಂಗ್ಲ ಭಾಷೆಯಲ್ಲಿಯೂ ಇವೆ. ಆಂಗ್ಲಭಾಷೆಯಲ್ಲಿ ಬರೆದುವೆಲ್ಲವೂ ವಂಗ ಭಾಷೆಗೆ ಪರಿವರ್ತಿತವಾಗಿ ಒಟ್ಟು ಎಲ್ಲ ಪತ್ರಗಳೂ ಐದು ಭಾಗಗಳಾಗಿ ಶ್ರೀ ರಾಮಕೃಷ್ಣ ಮಿಷನ್ನಿನ ಪ್ರಕಟನ ಕಾರ್ಯಾಲಯದಿಂದ ಪ್ರಕಟವಾಗಿವೆ. ಇದಲ್ಲದೆ ವಂಗಭಾಷೆಯಲ್ಲಿರುವ ಮೂಲಪತ್ರಗಳು ಆಂಗ್ಲಭಾಷೆಗೆ ಪರಿವರ್ತಿಸಲ್ಪಟ್ಟು ಒಟ್ಟು ಎಲ್ಲ ಪತ್ರಗಳೂ ಶ್ರೀಮತ್ ಸ್ವಾಮಿ ವಿವೇಕಾನಂದರವರ ಕೃತಿಗಳಲ್ಲಿ ಅಡಕವಾಗಿವೆ. ಇನ್ನೂ ಏನೆಂದರೆ, ಆಂಗ್ಲ ಭಾಷೆಯಲ್ಲಿ ಸುಮಾರು ಎಲ್ಲ ಪತ್ರಗಳೂ ಹಿಮಾಲಯ ಗ್ರಂಥಮಾಲೆಯಲ್ಲಿ ಅಚ್ಚಾಗಿ ಹೊರಬಿದ್ದಿವೆ. ಒಟ್ಟು ಪತ್ರಗಳಲ್ಲಿ ಕೆಲವು ಶ್ರೀಸ್ವಾಮಿಗಳು ತಮ್ಮ ಗುರುಭ್ರಾತೃಗಳಿಗೂ, ಕೆಲವು ತಮ್ಮನ್ನು ಅಮೆರಿಕಕ್ಕೆ ಕಳುಹಿಸಿದ ಮದ್ರಾಸಿನ ಉತ್ಸಾಹ ಪೂರಿತ ಯುವಕರಿಗೂ, ಇನ್ನು ಕೆಲವು ಅಮೆರಿಕದಲ್ಲಿ ಶ್ರೀ ಸ್ವಾಮಿಗಳಿಗೆ ಪರಿಚಿತರಾದವರಿಗೂ ಇತರರಿಗೂ ಬರೆದುವು. ಇವುಗಳನ್ನು ಓದಿದರೆ ನೆಲಕ್ಕುರುಳಿರುವ ಭಾರತವನ್ನು ಮರಳಿ ಮೇಲಕ್ಕೆತ್ತಿನಿಲ್ಲಿಸುವ ಪ್ರಯತ್ನಗಳಾವುವು, ವೈರಾಗ್ಯವೆಂದರೇನು, ಆಧ್ಯಾತ್ಮಿಕತೆ ಎಂದರೇನು, ಭಾರತದ ದೌರ್ಬಲ್ಯವನ್ನೂ ದಾರಿದ್ರ್ಯವನ್ನೂ ಮೌಢ್ಯವನ್ನೂ ನೀಗಿಸುವ ಉಪಾಯಗಳೇನು ಎಂಬ ಆಲೋಚನೆಗಳು ಶ್ರೀ ಸ್ವಾಮಿಗಳ ಮನಸ್ಸನ್ನು ಹೇಗೆ ಕಲಕಿ ಅವರಿಗೆ ನಿದ್ರೆ ಕೊಡದೆ ವ್ಯಥೆಪಡಿಸುತ್ತಿದ್ದುವೆಂಬುದು ಸ್ಪಷ್ಟವಾಗದೆ ಇರಲಾರದು. ಶ್ರೀ ಸ್ವಾಮಿಗಳಿಗೆ ಬಡವರಲ್ಲಿಯೂ ದೀನರಲ್ಲಿಯೂ ಇದ್ದ ಸಹಾನುಭೂತಿಯು ಒಟ್ಟೇನೆಂದರೆ ಅವರ ವಿಶ್ವ ಪ್ರೇಮವೇ ಅಪಾರ ಅಸನುಕರಣೀಯವಾದ ರೀತಿಯಲ್ಲಿ ವಿವರಿಸಲ್ಪಟ್ಟಿದೆ ಅವರ ಪತ್ರಗಳಲ್ಲಿ. ಅವುಗಳನ್ನು ಓದಿದ ವಾಚಕನ ಮನಸ್ಸು ಕದಲದೆ ಇರಲಾರದೆಂಬುದು ನನ್ನ ದೃಢವಾದ ನಂಬಿಕೆ, ಅವನು ಹೊಸ ಮನುಷ್ಯನಾಗುವುದರಲ್ಲಿ ಸಂಶಯವಿರದು.

ಇಂತಹ ಪತ್ರಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡಿ ಪ್ರಕಟಿಸಿದರೆ ಕನ್ನಡಿಗರಿಗೆ ಉಪಯೋಗವಾಗುವುದೆಂದು ಬೆಂಗಳೂರು ಶ್ರೀ ರಾಮಕೃಷ್ಣಾಶ್ರಮಾಧ್ಯಕ್ಷರಾದ ಶ್ರೀಮತ್ ಸ್ವಾಮಿ ನಿರ್ಮಲಾನಂದಜಿ ಅವರು ತಿಳಿದು ಪರಿವರ್ತನ ಕಾರ್ಯವನ್ನು ನಾನು ಕೈಕೊಳ್ಳಬೇಕೆಂದು

ನನಗೆ ಆಜ್ಞಾಪಿಸಿ ಪ್ರೋತ್ಸಾಹಿಸಲು, ನಾನು ಅವರ ಅನುಜ್ಞೆಯನ್ನು ಶಿರಸಾವಹಿಸಿ, ಇದುವರೆಗೆ ಅಚ್ಚಾಗಿ ಹೊರಬಿದ್ದಿರುವ ಪತ್ರಗಳೆಲ್ಲವನ್ನು ಪರಿವರ್ತನೆ ಮಾಡಿ ಮುಗಿಸಿದ್ದೇನೆ. ಪತ್ರಗಳಲ್ಲಿ ಕೆಲವು ಈಗಾಗಲೇ ಬೆಂಗಳೂರು ದೇಶೀಯ ವಿದ್ಯಾಶಾಲಾ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಆ ಪತ್ರಿಕೆಯು ತ್ರೈಮಾಸಿಕವಾದುದರಿಂದ ಪತ್ರಗಳೆಲ್ಲವನ್ನೂ ಅದರಲ್ಲಿ ಪ್ರಕಟಿಸುವುದಕ್ಕೆ ನಾಲ್ಕಾರು ವರುಷಗಳು ಹಿಡಿಯುವುದೆಂಬುದನ್ನರಿತು, ಅವುಗಳನ್ನು ನಾಲ್ಕುಭಾಗಗಳಾಗಿ ಮುದ್ರಿಸಬೇಕೆಂದು ಏರ್ಪಾಟು ಮಾಡಿದೆ. ಇದು ಪ್ರಥಮ ಭಾಗ. ಶ್ರೀರಾಮಕೃಷ್ಣಾಶ್ರಮ ಗ್ರಂಥ ಮಾಲೆಯಲ್ಲಿ ಏಳನೆಯದು.

ಶ್ರೀ ವಿವೇಕಾನಂದ ಸ್ವಾಮಿಗಳು ಸ್ಥಾಪಿಸಿದ ಶ್ರೀ ರಾಮಕೃಷ್ಣ ಮಿಷನ್ನಿನ ಕಾರ್ಯದಲ್ಲಿ ವಿಶೇಷ ಸಹಾನುಭೂತಿಯನ್ನು ತೋರಿಸುತ್ತಲಿರುವ ಮೈಸೂರು ಸಂಸ್ಥಾನದ ಯುವರಾಜರಾದ ಸರ್. ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ., ಅವರು ಕನ್ನಡ ಅನುವಾದವನ್ನು ತಮಗೆ ಅಂಕಿತಮಾಡಲು ಅತ್ಯುದಾರ ಮನಸ್ಸಿನಿಂದ ನನಗೆ ಅಪ್ಪಣೆಯನ್ನು ದಯಪಾಲಿಸಿದುದಕ್ಕಾಗಿ ನಾನು ಮಹಾಸ್ವಾಮಿ ಅವರಿಗೆ ಚಿರಕೃತಜ್ಞನಾಗಿದ್ದೇನೆ.

ಕರ್ಣಾಟಕ ಮಹಾಶಯರು ಈ ಸಣ್ಣ ಪುಸ್ತಕವನ್ನು ಓದಿ ಪ್ರೋತ್ಸಾಹಗೊಳಿಸಿದರೆ ಉಳಿದ ಮೂರು ಭಾಗಗಳನ್ನು ಬೇಗನೆ ಮುದ್ರಿಸಿ ಅವರ ಮುಂದಿಡುವ ಕಾರ್ಯವನ್ನು ಕೈಕೊಳ್ಳುತ್ತೇನೆ.

ವಂಗಭಾಷೆಯಲ್ಲಿ ಬರೆದ ಪತ್ರಗಳ ಪರಿವರ್ತನೆಯ ಕಾರ್ಯದಲ್ಲಿ ನಾನು ಮೂಲವನ್ನೇ ಅನುಸರಿಸಿದ್ದೇನೆ. ನನಗೆ ವಂಗಭಾಷಾ ಪರಿಚಯವು ಹೆಚ್ಚಾಗಿಲ್ಲದ ಕಾರಣ ನನಗೆ ಒದಗಿದ ಸಂಶಯಗಳನ್ನು ನಿವಾರಣೆಮಾಡಿದ ಶ್ರೀಮತ್ ಸ್ವಾಮಿ ನಿರ್ವೃತ್ತ್ಯಾನಂದ (ಮ॥ ರಾ॥ ಸುರೇನ್ ಬಾಬು) ರವರಿಗೆ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ನಂಗಪುರಂ. ವೆಂಕಟೇಶಯ್ಯಂಗಾರ್.

೧೮ನೆಯ ಜನವರಿ, ೧೯೨೯.
ಚಾಮರಾಜಪೇಟೆ, ಬೆಂಗಳೂರು ಸಿಟಿ.

ಈ ಅನುವಾದವು

ಮೈಸೂರು ಸಂಸ್ಥಾನದ ಯುವರಾಜರಾದ

ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್

ಬಹದ್ದೂರ್, ಜಿ. ಸಿ. ಐ. ಇ.

ಮಹಾಸ್ವಾಮಿಯವರಿಗೆ

ಅಪ್ಪಣೆಯನ್ನು ಪಡೆದು ಅಂಕಿತ ಮಾಡಿದೆ

# ಸ್ವಾಮಿ ವಿವೇಕಾನಂದರವರ ಪತ್ರಗಳು

ಖೇತ್ರಿ,
೨೭ನೇ ಏಪ್ರಿಲ್ ೧೮೯೩

ಡಾಕ್ಟರು ಮಹಾಶಯರೇ,

ತಮ್ಮ ಪತ್ರವು ಈಗ ತಾನೆ ತಲಪಿತು. ಅಯ್ಯೋ! ಪಾಪ! ಮಗನನ್ನು ಕಳೆದುಕೊಂಡನೆ ಆ........ ಈ ವಾರ್ತೆಯು ಬಹಳ ವಿಷಾದಕರವಾದುದು. "ದೇವರು ಕೊಟ್ಟ, ದೇವರು ಕಿತ್ತುಕೊಂಡ. ಆತನ ನಾಮವೇ ಧನ್ಯವಾಗಲಿ." ಯಾವುದೂ ನಾಶವಾಗುವುದಿಲ್ಲವೆಂಬುದು ಮಾತ್ರ ನಮಗೆ ಗೊತ್ತು. ಬಂದುದಕ್ಕೆ ಪೂರ್ಣಶಾಂತಿಯಿಂದ ತಲೆಬಾಗುವುದೇ ನಮ್ಮ ಕೆಲಸ. ಗುಂಡಿನ ಬಾಯಿಯ ಎದುರಿಗೆ ಹೋಗೆಂದು ಸಿಪಾಯಿಗೆ ಆಜ್ಞಾಪಿಸಿದ ದಂಡನಾಯಕನನ್ನು ದೂರುವ ಹಕ್ಕು ಸಿಪಾಯಿಗೆಲ್ಲಿಯದು? ಮಗನನ್ನು ಕಳೆದುಕೊಂಡವನನ್ನು ಆ ಸರ್ವೇಶನು ಸಂತವಿಸಲಿ. ಈ ವಿಪತ್ತು ಆತನನ್ನು ಕೃಪಾಮಯಿಯಾದ ಆ ಜಗನ್ಮಾತೆಯ ಹತ್ತಿರಕ್ಕೆ ಒಯ್ಯಲಿ.

ನನ್ನ ಪ್ರಯಾಣ ವಿಷಯವಾಗಿ ನಾನಾಗಲೇ ಮುಂಬಯಿಂದ ಏರ್ಪಾಟು ಮಾಡಿದ್ದೇನೆ. ರಾಜಾಜಿಯೂ ನನ್ನ ಗುರುಭಾಯಿಗಳೂ ನನ್ನ ದಾರಿಗಡ್ಡಲಾಗಲಾರರೆಂಬುದನ್ನು............ಗೆ ತಿಳಿಸೋಣವಾಗಲಿ ರಾಜಾಜಿಯ ವಿಷಯವೇನೆನ್ನುವಿರೋ! ನನ್ನಮೇಲಣ ಅವರ ಪ್ರೇಮಕ್ಕೆ ಮೇರೆ ಇಲ್ಲ.

ಸರ್ವಮಂಗಳದಾಯಕನು ತಮ್ಮನ್ನು ಇಹದಲ್ಲಿಯೂ ಪರದಲ್ಲಿಯೂ ಹರಸಲಿ ಎಂಬುದೀಗ ಸಂತತ ಪ್ರಾರ್ಥನೆಯು

ವಿವೇಕಾನಂದನ.

*   *   *   *

ಒಬ್ಬಾನೊಬ್ಬ ಮದರಾಸು ಸ್ನೇಹಿತನಿಗೆ ಪ್ರಬಲವಾದ ವಿಪತ್ತು ಒದಗಿದಾಗ ೧೮೯೩ ರಲ್ಲಿ ಬರೆದುದು :

"ಬೆತ್ತಲೆ ಬಂದೆ ನನ್ನ ತಾಯಿಯ ಗರ್ಭದಿಂದ ಬೆತ್ತಲೆಯಾಗಿಯೇ ತೆರಳುವೆ ನಾನಲ್ಲಿಗೆ. ದೇವರು ಕೊಟ್ಟ, ಆತನೇ ಕಿತ್ತುಕೊಂಡ, ಆತನ ನಾಮವೇ ಧನ್ಯವಾಗಲಿ" ಎಂದು ನುಡಿದನಾ ಪ್ರಾಚೀನ ಎಹೂದ್ಯ ಮಹಾತ್ಮನು ಮನುಷ್ಯನಿಗೆ ಒದಗಬಹುದಾದ ಮಹತ್ತಮ ವಿಪತ್ತುಗಳನ್ನನುಭವಿಸುವಾಗ. ಪ್ರಯಲ್ಲ ಈ ಸೂಲ್. ಈ ಬಾಳಿನ (Existence) ಒಟ್ಟು ರಹಸ್ಯವೇ ಅಡಗಿರುವುದದರಲ್ಲಿ. ಕಡಲಿನ ಮೇಲೆ ಅಲೆಗಳೆಷ್ಟು ಮುಂದುರುಳಬಹುದು. ಮೇಲೆ ಚಂಡಮಾರುತಗಳು ಬೀಸಬಹುದು ಉಗ್ರವಾಗಿ. ಆದರೆ ಕೆಳಗೆ ಆಳದಲ್ಲಿ ಅನಂತಸಮಾಧಾನ ಅನಂತ ಶಾಂತಿ ಅನಂತಾನಂದ ಇವುಗಳ ತಳನೀರಿರುವುದಲ್ಲವೆ! "ದುಃಖಕ್ಕೀಡಾದವರೇ ಧನ್ಯರು; ಏಕೆಂದರೆ ಸಂತಸವಡೆವರವರು...." ಯಾಕಪ್ಪಾ! ತಂದೆಯ ರೋದನವನ್ನೂ, ತಾಯಿಯ ಗೋಳನ್ನೂ ಲೆಕ್ಕಿಸದೆ ಹೃದಯವನ್ನು ಹಿಂಡುವಾಗಲ್ಲವೆ ದುಗುಡ ಎದೆಗುಂದು ನಿರಾಶೆಗಳೆಂಬಿವುಗಳ ಹೊರೆಯ ಭಾರದಿಂದ ನಮ್ಮಡಿಗಳ ಕೆಳಗೆ ಪ್ರಪಂಚವೇ ಜಾರಿಹೋದಂತೆ ತೋರುವಾಗಲ್ಲವೆ ಕ್ಲೇಶನಿರಾಶೆಗಳೆಂಬ ತೂರಲಾರದ ಮುಸುಕು ಎಲ್ಲೆಡೆಗಳಲ್ಲಿಯೂ ಕವಿದಿರುವಂತೆ ತೋರುವಾಗಲ್ಲವೆ ತೆರೆಯುವುದು ಒಳಗಣಕಣ್ಣು ಬೆಳಕು ಹಟಾತ್ತಾಗಿ ಹೊಳೆಯುವುದು ಆಗಲ್ಲವೆ! ಕನಸು ಮಾಯವಾಗುವುದು ಆಗ ತಾನೆ ಅಲ್ಲವೆ! ಪ್ರಕೃತಿಯಲ್ಲಿನ ಪರಮ ರಹಸ್ಯವಾದ ಸತ್ತಿನೆದುರಿಗೆ ನಾವರಿಯದೆಯೇ ನಾವು ನಿಲ್ಲುವುದು ಆಗ ತಾನೆ ಅಲ್ಲವೆ! ಪ್ರತಿಭಾಶಾಲಿಯೂ ಬಲಶಾಲಿಯೂ ವೀರನೂ, ಅನಂತವೂ ಪರಮವೂ ನಿತ್ಯಾನಂದಮಯನೂ ಆದಂಥ ಬೇರೆಬೇರೆ ದೇಶಗಳಲ್ಲಿ ಬೇರೆ

ಬೇರೆ ನಾಮಗಳಿಂದ ಪೂಜೆ ಹೊಂದುವ ಅನಂತ ಸತ್ತಾತ್ಮ ಎಂಬ ಬ್ರಹ್ಮವನ್ನು ನೋಡುವುದು ಆಗತಾನೆ ಅಲ್ಲವೆ! ಆ ಸಮಯದಲ್ಲಿ ತಾನೆ ಕ್ಲೇಶವೆಂಬ ಬಿಲಕ್ಕೆ ಆತ್ಮನನ್ನು ಕಟ್ಟಿಹಾಕುವ ಬೇಡಿಯು ಕೊಂಚ ಕಾಲ ಒಡೆದು ಕಳಚಿಹೋಗಲು ಮುಕ್ತಾತ್ಮನು ಎಲ್ಲಿ ದುಷ್ಟರ ಕಾಟವಿಲ್ಲವೋ ಎಲ್ಲಿ ಬಳಲಿದವರು ವಿಶ್ರಾಂತಿಯನ್ನು ಅನುಭವಿಸುವರೋ ಆ ಭಗವತ್ಸಾನ್ನಿಧ್ಯವನ್ನು ಮುಟ್ಟುವ ಪರ್ಯಂತ ಮೇಲಕ್ಕೇಳುತ ಹೋಗುತ್ತಾನೆ.

ಎನ್ನ ಒಡಹುಟ್ಟಿದವನೇ! "ನಿನ್ನ ಇಷ್ಟವಿದ್ದಂತಾಗಲಿ. ಏಕೆ ಎಂದು ಪ್ರಶ್ನೆಮಾಡುವುದು ನಮ್ಮ ಕಾರ್ಯವಲ್ಲ. ಕಾರ್ಯಮಾಡಿ ಸಾಯುವುದು ನಮ್ಮ ಕಾರ್ಯ. ಎಲೈ! ದೇವ, ನಿನ್ನ ನಾಮವಾದರೆ ಪವಿತ್ರವಾದುದು. ನಿನ್ನ ಇಷ್ಟಾರ್ಥ ಸಿದ್ಧಿಸಲಿ. ಎನ್ನೊಡೆಯ! ತಲೆವಾಗಬೇಕೆಂಬುದನ್ನು ಬಲ್ಲೆವು ನಾವು. ಮನಸ್ಸೇನೋ ಗಟ್ಟಿ. ಆದರೆ ಕಾಯವು ಟೊಳ್ಳು. ಪ್ರೇಮಮಯ ಪಿತನೇ! ಶಾಂತಿಯಿಂದೊಡಗೂಡಿದ ವೈರಾಗ್ಯವನ್ನು ತಾಳಬೇಕೆಂಬ ನಿನ್ನ ಉಪದೇಶವೇನೋ ಸರಿ, ಆದರೆ ಹೃದಯ ವೇದನೆಯು ಅದರೊಡನೆ ಹೋರಾಡುವುದಲ್ಲ. ಬಲವನ್ನು ಕೊಡೋ ಎನ್ನನಾಳ್ದವನೆ! ನಿನ್ನ ಕಣ್ಣೆದುರಿಗೇ ನಿನ್ನ ಸಂತಾನನಾಶವನ್ನು ಕೈಕಟ್ಟಿಕೊಂಡು ನೋಡಿದಾತನೆ! ಎನ್ನರಸ! ಆಜ್ಞಾಪಾಲನವೇ ಸಿಪಾಯಿಯ ಕೆಲಸ, ಮಾತನಾಡುವುದಲ್ಲವೆಂಬುದನ್ನುಪದೇಶಿಸಿದ ಮಹಾ ಗುರುವೇ! ಬಾ! ನಿನ್ನಲ್ಲಿ ಮರೆಹೋಗುವುದೇ ಪರಮ ಪುರುಷಾರ್ಥವೆಂದು ಅರ್ಜುನನಿಗುಪದೇಶಿಸಿದ ಎಲೈ ಪಾರ್ಥಸಾರಥಿಯೇ ಬಾ! ಹಿಂದಣ ಮಹಾಪುರುಷರ ಜತೆಗೆ ನಾನು ಮನಸ್ಸನ್ನು ಗಟ್ಟಿಮಾಡಿಕೊಂಡು ತ್ಯಾಗಬುದ್ಧಿಯಿಂದ 'ಓಂ ಕೃಷ್ಣಾರ್ಪಣಮಸ್ತು' ಎಂದು ಮೊರೆಯಿಡುವಂತೆ ನನಗೂ ಕಲಿಸೋ" ಎಂದು ಹಗಲೂ ಇರುಳೂ ಹಂಬಲಿಸುವುದನ್ನು ನಿಲ್ಲಿಸಬೇಡ.

ಭಗವಂತನು ನಿನಗೆ ಶಾಂತಿಯನ್ನೀಯಲೆಂಬುದೇ ಅಹರ್ನಿಶವೂ ಪ್ರಾರ್ಥನೆಯು

ವಿವೇಕಾನಂದನ.

*　　*　　*　　*

ಯೋಕೋಹಾಮ,
೧೧ನೇ ಜುಲೈ ೧೮೯೩.

ಪ್ರಿಯ........

ನನ್ನ ಸಂಚಾರದ ಪರಿಯನ್ನು ಕುರಿತು ತಮಗೆ ನಿತ್ಯವೂ ತಿಳಿಸದೆ ಇರುವದಕ್ಕಾಗಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇನೆ. ಒರ್ವನಿಗೆ ಪ್ರತಿನಿತ್ಯವೂ ಎಷ್ಟೋ ಕೆಲಸ. ಅಂತು ನನ್ನ ವಿಷಯದಲ್ಲಿ ವಿಶೇಷ, ಏಕೆಂದರೆ ಪದಾರ್ಥಗಳನ್ನು ಸಂಗ್ರಹಮಾಡಿ ಅವುಗಳನ್ನು ಕಾಪಾಡುವ ಬದುಕು ನನಗೆ ಹೊಸದು. ಇದಕ್ಕೆ ನನ್ನ ಎಷ್ಟು ಶಕ್ತಿವ್ಯಯವೋ! ನಿಜವಾಗಿಯೂ ಇದು ಭಯಂಕರವಾದ ತೊಂದರೆ.

ಕೊಲಂಬೊ ಮುಟ್ಟಿದೆವು. ನಮ್ಮ ಜಹಜು ಸುಮಾರು ಹಗಲೆಲ್ಲಾ ರೇವೆಯಲ್ಲಿ ನಿಂತಿದ್ದುದರಿಂದ ಇದೇ ಸಮಯವೆಂದರಿತು ದಡಕ್ಕೆ ಬಂದು ಗಾಡಿ ಮಾಡಿಕೊಂಡು ಪಟ್ಟಣವನ್ನು ನೋಡುವುದಕ್ಕಾಗಿ ರಸ್ತೆಗಳಲ್ಲಿ ಹೊರಟೆವು. ನನಗಿದೊಂದು ಮಾತ್ರ ಜ್ಞಾಪಕ—ಒರಗಿಕೊಂಡಿರುವ ಬುದ್ಧದೇವನ ಬೃಹನ್ನಿರ್ವಾಣಮೂರ್ತಿಯನ್ನೊಳಗೊಂಡ ದೇವಾಲಯವು.

ಮುಂದೆ ಪೀನಾಂಗ. ಮಲಯ ಪರ್ಯಾಯದ್ವೀಪಕ್ಕೆ ಸೇರಿ ಸಮುದ್ರಕರೆಗಂಟಿರುವ ಭೂಪ್ರದೇಶವಿದು. ಮಲಯವಾಸಿಗಳೆಲ್ಲರೂ ಮಹಮ್ಮದೀಯರು. ಪೂರ್ವದಲ್ಲಿ ಅವರೆಲ್ಲರೂ ಪ್ರಸಿದ್ಧರಾದ ಕಡಲ್ಗಳ್ಳರು. ವ್ಯಾಪಾರದ ಜಹಜುಗಳ ಮಿಂಡರು. ಆದರೆ ಈಗಿನ ಕಾಲದ ಅಂತಸ್ತು ಜಹಜುಗಳ ದೊಡ್ಡ ಫಿರಂಗಿಗಳು ಮಲಯರನ್ನು ಶಾಂತಕರವಾದ ಉದ್ಯೋಗಗಳನ್ನು ಹುಡುಕುವಂತೆ ಬಲಾತ್ಕರಿಸಿರುವುವು.

ಪೀನಾಂಗಿನಿಂದ ಸಿಂಗಪುರಕ್ಕೆ (ಸಿಂಹಪುರಕ್ಕೆ) ಹೋಗುವ ಮಾರ್ಗದಲ್ಲಿ ಉನ್ನತ ಪರ್ವತಗಳಿಂದ ಕೂಡಿದ ಸುಮಾತ್ರಾದ್ವೀಪವು ಕೊಂಚ ಕೊಂಚ ಕಾಣುತ್ತಿತ್ತು. ಜಹಜಿನ ನಾಯಕನು ಅನೇಕ ಸ್ಥಳಗಳನ್ನು ತೋರಿಸಿ ಅವು ಹಿಂದೆ ಕಡಲ್ಗಳ್ಳರಿಗೆ ಪ್ರಿಯಸ್ಥಾನಗಳಾಗಿದ್ದುವೆಂದು ಹೇಳಿದನು. ಸ್ಟ್ರೈಟ್ಸ್ ಸೆಟ್ಲ್‌ಮೆಂಟ್ಸಿಗೆ ಸಿಂಗಪುರವೇ ರಾಜಧಾನಿಯು.

ತಾಳೆಜಾತಿಗೆ ಸೇರಿದ ಅನೇಕ ತರಹದ ವೃಕ್ಷಗಳನ್ನುಳ್ಳ ಸೊಗಸಾದೊಂದು ಉದ್ಭಿದುದ್ಯಾನವಿರುವುದಿಲ್ಲಿ. ಯಾತ್ರಿಕರ ತಾಳೆ ಎಂದು ಹೆಸರುಗೊಂಡ ತಾಳೆಮರವು ಇಲ್ಲಿ ಬೆಳೆಯುವುದು ಅತಿಶಯವಾಗಿ. ಬ್ರೆಡ್‌ಫ್ರೂಟ್ ಎಲ್ಲೆಲ್ಲಿಯೂ ಬೆಳೆಯುವುದು. ಮದ್ರಾಸಿನಲ್ಲಿ ಮಾವು ಎಷ್ಟು ಅಧಿಕವೋ ಅಷ್ಟು ಅಧಿಕವು ಮಾಂಗೊಸ್ಟೀನ್ ಎಂಬುದು. ಆದರೆ ಮಾವು ಎಣೆಯಿಲ್ಲದುದು. ಇಲ್ಲಿಯ ಜನರು ವಿಷುವದ್ರೇಖೆಯ ಸಮೀಪದಲ್ಲಿದ್ದರೂ ಮದರಾಸಿನವರಷ್ಟು ಕಪ್ಪಲ್ಲ. ಸಿಂಹಪುರದಲ್ಲಿ ಸೊಗಸಾದುದೊಂದು ಸರ್ವವಸ್ತು ಪ್ರದರ್ಶನಶಾಲೆಯಿರುವುದು.

ಮುಂದೆ ಹಾಂಕಾಂಗ್—ಮನಸ್ಸಿಗೆ ಚೀಣಾವನ್ನು ಮುಟ್ಟಿದಂತೆಯೇ ಇದೆ; ಇಲ್ಲಿ ಚೀಣಾರಷ್ಟು ಪ್ರಾಬಲ್ಯ. ಉದ್ಯೋಗ ವ್ಯಾಪಾರಗಳೆರಡೂ ಇವರ ಕೈಯಲ್ಲಿರ್ಪುವಂತೆ ತೋರುತ್ತದೆ. ಹಾಂಕಾಂಗು ನಿಜವಾಗಿಯೂ ಚೀಣಾ. ಜಹಜು ಲಂಗರು ಹಾಕಿದೊಡನೆಯೇ ಪ್ರಯಾಣಿಕರನ್ನು ದಡಕೊಯ್ಯಲು ನೂರಾರು ಚೀಣಾ ದೋಣಿಗಳು ಅದರ ಸುತ್ತಲೂ ಮುತ್ತುತ್ತವೆ. ಎರಡು ಚುಕಾಣಿಗಳುಳ್ಳ ಈ ದೋಣಿಗಳೇ ಒಂದು ಬಗೆ. ದೋಣಿಯವನಿಗೆ ಸಂಸಾರ ಸಮೇತವಾಗಿ ದೋಣಿಯಲ್ಲೇ ವಾಸ. ಸುಮಾರು ಯಾವಾಗಲೂ ಚುಕಾಣಿಗಳನ್ನು ನಡೆಯಿಸುವುದು (ಕೈಗಳಿಂದ ಒಂದನ್ನು ಒಂದು ಕಾಲಿನಿಂದ ಮತ್ತೊಂದನ್ನು) ಹೆಂಡತಿಯ ಕೆಲಸ. ನೂರರಲ್ಲಿ ತೊಂಭತ್ತು ಮಂದಿಯ ಬೆನ್ನಿಗೆ ಕೈಕಾಲುಗಳನ್ನು ಜೋಲುಬಿಟ್ಟುಕೊಂಡಿರುವ ಕೂಸು ಒಂದು ಕಟ್ಟಿರುವುದು. ತಾಯಿ ಭಾರವಾದ ಮೂಟೆಗಳನ್ನು ನೂಕುವಾಗಲೂ ದೋಣಿಯಿಂದ ದೋಣಿಗೆ ಆಶ್ಚರ್ಯವಾದ ಲಾಘವನೊಡನೆ ಹಾರುವಾಗಲೂ ಆಕೆಯ ಬೆನ್ನಿಗೆ ಪುಟ್ಟಚೀಣಾನು ಸದ್ದುಮಾಡದೆ ತಗಲಿಕೊಂಡಿರುವುದು ವಿಜಾತೀಯವಾದ ನೋಟವು. ಅಪ್ಪಾ! ಒಳಕ್ಕೆ ಹೋಗುವ ಹೊರಕ್ಕೆ ಬರುವ ದೋಣಿಗಳ ಉಗಿದೋಣಿಗಳ ಏನು ಸುಗ್ಗಾಟ! ಪ್ರತಿಕ್ಷಣವೂ ಕೂಸಿನ ಪುಟ್ಟ ತಲೆಯು ಜಡೆ ಸಹಿತ ನಜ್ಜುಗುಜ್ಜು ಆಗುವ ಅಪಾಯ. ಆದರೆ ಕೂಸಿಗೆಷ್ಟು ಅರಿಷ್ಟಗಳು. ಈ ದಡಬಡ ದುಡಿತದ ಬಾಳಿನಲ್ಲಿ ಅದಕ್ಕೇನು

ಮರುಳು. ? ಮುಡಿಯುವ ಹುಚ್ಚು ಹಿಡಿದಿರುವ ಅಮ್ಮಾಸು ಆಗಿಂದಾಗ್ಗೆ ಕೊಡುವ ಅಕ್ಕಿರೊಟ್ಟಿಯ ರುಚಿರಚನೆಗಳನ್ನು ಕಲಿಯುವುದರಲ್ಲಿ ಅದಕ್ಕೆ ತೃಪ್ತಿ. ಚೀಣಾ ಕೂಸು ಪೂರ್ಣ ತತ್ವಜ್ಞಾನಿ. ನಿಮ್ಮ ಇಂಡಿಯಾ ದೇಶದ ಹುಡುಗನು ಮಂಡಿಗಾಲಿನಲ್ಲಿ ತೆವಳುವದಕ್ಕೆ ಕೂಡ ಕೈಲಾಗದ ವಯಸ್ಸಿನಲ್ಲಿ ಅದು ಕೆಲಸಕ್ಕೆ ಹೋಗುತ್ತದೆ ಶಾಂತಚಿತ್ತದಿಂದ ದಾರಿದ್ರ್ಯದ ತತ್ವವನ್ನರಿತ ಕೂಸದು. ಚೀಣರೂ ಒಣ ಒಣಗಿ ನೀರಸರಾದ ಇಂಡಿಯಾ ದೇಶದವರೂ ಬೆಳವಣಿಗೆ ಅಡಗಿದ ನಾಗರಿಕತೆಯಲ್ಲಿರುವುದಕ್ಕೆ ಅವರ ದಟ್ಟದಾರಿದ್ರ್ಯವು ಒಂದು ಕಾರಣ. ಸಾಮಾನ್ಯನಿಗೆ ಹಿಂದುವಾಗಲಿ ಚೀಣನಾಗಲಿ ಪ್ರತಿದಿನವೂ 'ಇಲ್ಲ'ದ ಗೋಳು ಇತರ ಆಲೋಚನೆಗಳಿಗೆ ಎಡೆಗೊಡದಷ್ಟು ಘೋರ.

ಹಾಂಕಾಂಗ್ ಅತಿ ಸುಂದರವಾದ ಪಟ್ಟಣ. ಬೆಟ್ಟಗಳ ತಪ್ಪಲುಗಳ ಮೇಲೆಯೂ ಪಟ್ಟಣಕ್ಕಿಂತ ತಣ್ಣಗಿರುವ ಶಿಖರಗಳ ಮೇಲೆಯೂ ಹಬ್ಬಿಕೊಂಡಿರುವುದದು. ಉಗಿ ಶಕ್ತಿಯೂ ತಂತಿಯ ಹಗ್ಗವೂ ಬೆಟ್ಟದ ಕಿಬ್ಬಿಯಿಂದ ಮೇಲಿನವರೆಗೆ ಎಳೆದುಕೊಂಡು ಹೋಗುವ ಸುಮಾರು ನೆತ್ತಿಗೆ ನೇರವಾದ ಅಂದರೆ ಬಲು ಕಡಿದಾದ ಟ್ರಾಂಮಾರ್ಗಗಳುಂಟು.

ಹಾಂಕಾಂಗಿನಲ್ಲಿ ನಾವು ಮೂರು ದಿವಸಗಳು ಉಳಿದುಕೊಂಡು ಒಂದು ನದಿಯ ಮೂಲದ ಕಡೆ ೮೦ ಮೈಲಿಗಳ ದೂರದಲ್ಲಿ ಅದರ ದಡಗಳ ಮೇಲಿರುವ ಕಾನ್ಟನ್ ಪಟ್ಟಣವನ್ನು ನೋಡುವುದಕ್ಕೆ ಹೋದೆವು. ಅಪ್ಪಾ ! ಅದು ಏನು ನೋಟ ! ಆ ಜಹಜುಗಳ ಸಂದಣಿಯೇನು ? ನೀರು ಕಾಣುವುದೇ ದುಸ್ತರವಾಗಿ ಅದನ್ನು ಸುಮಾರು ಸಂಪೂರ್ಣವಾಗಿ ಮುಚ್ಚಿಕೊಂಡಿರುವ ದೋಣಿಗಳ ಸಂಖ್ಯೆಯೆಷ್ಟೋ ? ವ್ಯಾಪಾರದ ದೋಣಿಗಳಲ್ಲದೆ ಮನೆಗಳಂತೆ ವಾಸದ ದೋಣಿಗಳೇನು ! ಅವುಗಳ ಅಂದವೇನು ! ಅವೆಷ್ಟು ದೊಡ್ಡವು ! ನಿಜವಾಗಿಯೂ ಅವು ಎರಡು ಮೂರು ಅಂತಸ್ತುಗಳುಳ್ಳ ದೊಡ್ಡ ಮನೆಗಳು, ಸುತ್ತಲೂ ವರಾಂಡಾ, ಮಧ್ಯರಸ್ತೆಗಳು, ಎಲ್ಲಾ ತೇಲಾಟವೇ ! ತೆಪ್ಪೋತ್ಸವವೇ !

ಪರದೇಶೀಯರ ಆವಾಸಕ್ಕಾಗಿ ಚೀಣಾ ಸರ್ಕಾರದವರು ಬಿಟ್ಟುಕೊಟ್ಟಿರುವ ಪ್ರದೇಶದ ಮೇಲೆ ಕಾಲಿಟ್ಟೆವು ನಾವು. ನಮ್ಮ ಸುತ್ತಲೂ

ನದಿಯ ಎರಡು ದಡಗಳ ಮೇಲೆ ಇಕ್ಕೆಲದಲ್ಲಿಯೂ ಮೈಲುಗಟ್ಟಲೆಯಾಗಿ ಹಬ್ಬಿರುವುದಾ ದೊಡ್ಡ ಪಟ್ಟಣವು. ಅಪ್ಪ! ಅದೇನು ಸೂಕಾಟ, ಏನು ಹೋರಾಟ! ಏನು ಏಳಾಟ! ಏನು ಕೂಗಾಟ ಇವುಗಳಿಂದ ಉಲ್ಲೋಲ ಕಲ್ಲೋಲವಾದೊಂದು ದೊಡ್ಡ ಪಟ್ಟಣವದು. ಆದರೆ ಅಷ್ಟು ಜನಸಂಖ್ಯೆ ಅಷ್ಟು ಕರ್ಮೋತ್ಸಾಹದ ಗಡಿಬಿಡಿಯಿದ್ದರೂ ನಾನು ನೋಡಿದ್ದುದರಲ್ಲೆಲ್ಲಾ ಅದು ಬಲು ಹೊಲಸು ಪಟ್ಟಣ. ಇಂಡಿಯಾದೇಶದಲ್ಲಿಯ ಪಟ್ಟಣವು ಹೊಲಸೆಂದು ಹೇಳುತ್ತೇವಲ್ಲಾ ಆ ದೃಷ್ಟಿಯಿಂದಲ್ಲ. ಏಕೆಂದರೆ ಚೀಣರು ಎಳ್ಳಷ್ಟು ಕೊಳಕನ್ನು ಕೂಡ ನಿಷ್ಪ್ರಯೋಜಕವಾಗಗೊಡಿಸುವುದಿಲ್ಲ. ಆದರೆ ಆ ಚೀಣಸಿದ್ಧಾನಲ್ಲ—ಸ್ನಾನೆಂದೂ ಮೈತೊಳೆಯುವುದಿಲ್ಲವೆಂದು ಹರಕೆ ಕಟ್ಟಿಕೊಂಡಿರುವಂತೆ ತೋರುತ್ತದೆ. ಆ ಕಾರಣದಿಂದ ಹೊಲಸು.

ಒಂದೊಂದು ಮನೆಯೂ ಒಂದೊಂದು ಅಂಗಡಿ. ಜನಗಳ ವಾಸ ಮಹಡಿಯಮೇಲೆ. ರಸ್ತೆಗಳೆಲ್ಲವೂ ಬಲು ಕಿರಿದು. ಆದುದರಿಂದ ನಾವು ಹೋಗುವಾಗ್ಗೆ ಎರಡು ಕಡೆಗಳಲ್ಲಿಯೂ ಮುಟ್ಟಿಕೊಂಡು ಹೋಗುವಂತೆ ತೋರುತ್ತದೆ. ಹತ್ತು ಹತ್ತು ಹೆಜ್ಜೆಗೊಂದು ಮಾಂಸದಂಗಡಿ. ಬೆಕ್ಕು ನಾಯಿಗಳ ಮಾಂಸವನ್ನು ಮಾರುವ ಅಂಗಡಿಗಳೂ ಉಂಟು. ನಾಯಿ ಬೆಕ್ಕುಗಳನ್ನು ತಿನ್ನುವವರು ಕಡು ಬಡವರಾದ ಚೀಣರು ಮಾತ್ರ.

ಚೀಣಾ ಹೆಂಗಸರನ್ನು ಯಾರೂ ನೋಡಲಾಗದು. ನಮ್ಮ ಉತ್ತರ ಹಿಂದೂಸ್ಥಾನದ ಜನಾನದಷ್ಟೇ ಕಟ್ಟು ಇಲ್ಲಿ. ಕೂಲಿ ಹೆಂಗಸರನ್ನೇನೋ ನೋಡಬಹುದು. ಇವರಲ್ಲಿ ಕೂಡ ನಿಮ್ಮ ಎಳೆಗೂಸಿನ ಅಡಿಗಳಿಗಿಂತಲೂ ಸಣ್ಣವಾದ ಅಡಿಗಳನ್ನುಳ್ಳ ಹೆಂಗಸು ಈಗಾಗ ದೃಷ್ಟಿಗೆ ಬೀಳುವಳು. ಅವರ ನಡೆಯೆಲ್ಲಾ ಕುಂಟು.

ಚೀಣರ ದೇವಾಲಯಗಳನ್ನು ನೋಡುವುದಕ್ಕೆ ಹೋದೆನು. ಅವುಗಳಲ್ಲಿ ದೊಡ್ಡದಾದುದು ಪ್ರಥಮ ಬೌದ್ಧ ಚಕ್ರವರ್ತಿಯ, ಮೊದಲು ಬೌದ್ಧಮತವನ್ನವಲಂಬಿಸಿದ ಐದುನೂರು ಮಂದಿಯ, ಜ್ಞಾಪಕಾರ್ಥ

ವಾಗಿ ಪ್ರತಿಷ್ಠವಾದುದು. ಮೂರ್ತಿಗಳಲ್ಲಿ ಮುಖ್ಯವಾದುದು ಬುದ್ಧ ದೇವನದು. ಅದರ ಕೆಳಗಣದು ಚಕ್ರವರ್ತಿಯದು. ಎರಡು ಪಕ್ಕಗಳಲ್ಲಿಯೂ ಸಾಲಾಗಿಟ್ಟಿರುವುವಾವುವೆಂದರೆ ಪ್ರಥಮ ಶಿಷ್ಯರದು. ಎಲ್ಲವೂ ಮರದಲ್ಲಿ ಸೊಗಸಾಗಿ ಕಡೆದ ಪ್ರತಿಮೆಗಳು.

ಕಾನ್ಟನ್ನಿಂದ ಹಾಂಕಾಂಗಿಗೆ ಹಿಂತಿರುಗಿ ಬಂದೆವು. ಅಲ್ಲಿಂದ ಮುಂದೆ ಜಪಾನ್. ನಾವು ಮೊದಲು ಮುಟ್ಟಿದ ರೇವೆಯು ನಾಗಸಾಕಿ. ಕರೆಗೆ ಹೋಗಿ ಕೆಲವು ಗಂಟೆಗಳಕಾಲ ಪಟ್ಟಣದಲ್ಲಿ ಗಾಡಿಸವಾರಿ ಹೊರಟೆವು. ಚೀಣಕ್ಕೂ ಇಲ್ಲಿಗೂ ಅದೇನು ವ್ಯತ್ಯಾಸ! ಈ ಭೂಮಂಡಲದ ಮೇಲಣ ಅತ್ಯಂತ ಶುಭ್ರವಾದ ಜನವರ್ಗಕ್ಕೆ ಸೇರಿದವರು ಜಪಾನರು. ಇಲ್ಲಿ ಪ್ರತಿಯೊಂದೂ ಎಷ್ಟು ಹಸನು, ಎಷ್ಟು ಚೊಕ್ಕಟ! ಅವರ ಬೀದಿಗಳೋ ಸುಮಾರು ಎಲ್ಲಾ ನೆಟ್ಟಗಿದ್ದು ಕ್ರಮವಾಗಿ ಕಲ್ಲು ಹಾಸಿದವು. ಅವರ ಸಣ್ಣ ಮನೆಗಳು ಪಂಜರದಂತವು. ಸಾಮಾನ್ಯವಾಗಿ ಪ್ರತಿಯೊಂದು ಊರೂ ಹಳ್ಳಿಯೂ ದೇವದಾರು ಮರಗಳಿಂದ ಮುಚ್ಚಿ ಸದಾ ಹಚ್ಚಗಿರುವ ಗುಡ್ಡಗಳ ಸಮೀಪದಲ್ಲಿರುವುವು. ಜಪಾನರು ಮೋಟರು. ಅವರ ಮೈಬಣ್ಣ ಸೊಗಸಾದುದು. ಉಡುಪು ವಿಲಕ್ಷಣ. ಅವರ ನಡೆನುಡಿ ಹಾವಭಾವಗಳ ಚಂದವೇ ಚಂದ. ಪ್ರತಿಯೊಂದು ಮನೆಯ ಹಿತ್ತಲಲ್ಲಿಯೂ ಜಪಾನರ ಷೋಕಿಯಂತೆ ಸಣ್ಣ ಗಿಡಗಳಿಂದಲೂ, ಹುಲ್ಲು ಮಡಿಗಳಿಂದಲೂ, ಕೃತಕ ಜಲಾಶಯಗಳಿಂದಲೂ, ಸಣ್ಣ ಕಲ್ಲು ಸೇತುವೆಗಳಿಂದಲೂ ಸೊಗಸುವೆತ್ತ ತೋಟ.

ನಾಗಸಾಕಿ ಬಿಟ್ಟು ಕೋಬೆಗೆ ಹೋದೆವು; ಇಲ್ಲಿ ಜಹಜಿನ್ನಿಳಿದು ಒಳಸೀಮೆಯನ್ನು ನೋಡುವ ಉದ್ದೇಶದೊಡನೆ ನೆಲದಾರಿಯನ್ನು ಹಿಡಿದೆವು. ಒಳಸೀಮೆಯಲ್ಲಿ ನಾವು ನೋಡಿದ ದೊಡ್ಡ ಪಟ್ಟಣಗಳು ಮೂರು. ಒಸಾಕ ದೊಡ್ಡ ಕೈಗಾರಿಕೆಯ ಪಟ್ಟಣ. ಹಿಂದೆ ರಾಜಧಾನಿಯಾಗಿದ್ದ ಕಯೋಟೋ. ಈಗಿನ ರಾಜಧಾನಿಯಾದ ಟೋಕಿಯೋ. ಟೋಕಿಯೋವಿನ ವಿಸ್ತಾರ ಪ್ರಾಯಕವಾಗಿ ಕಲ್ಕತ್ತೆಯ ಇಮ್ಮಡಿಯಷ್ಟು. ಪ್ರಜಾಸಂಖ್ಯೆಯು ಸುಮಾರು ಅಷ್ಟೇ.

ಅಪ್ಪಣೆ ಚೀಟಿಯಿಲ್ಲದೆ ಅನ್ಯದೇಶೀಯನಾವನಿಗೂ ಒಳ ಸೀಮೆ ಯಲ್ಲಿ ಸಂಚಾರಕ್ಕವಕಾಶವಿಲ್ಲ.

ಈಗಣ ಕಾಲಕ್ಕೆ ಆವಶ್ಯಕವಾವುದೆಂಬುದನ್ನು ಜಪಾನರು ಸಂಪೂರ್ಣವಾಗಿ ಗ್ರಹಿಸಿರುವಂತೆ ತೋರುತ್ತದೆ. ಜಪಾನ್ ಸೈನ್ಯಾಧಿಕಾರಿಯಿಂದಲೇ ಕಲ್ಪಿತವಾದ ಫಿರಂಗಿಗಳಿಂದ ಕೂಡಿ ಸುಶಿಕ್ಷಿತವಾಗಿ ಒಳ್ಳೆಯ ಕಟ್ಟುಳ್ಳ ಅವರ ಸ್ಥಳಸೈನ್ಯವು ಯಾವುದಕ್ಕೂ ಎರಡನೆಯದಲ್ಲ. ಅವರ ನೌಕಾಪಡೆಯು ಕ್ರಮವಾಗಿ ಬೆಳೆಯುತ್ತಲೇ ಇರುವುದು. ಜಪಾನ್ ಶಿಲ್ಪಜ್ಞನೇ ಕೊರೆದ ಒಂದು ಮೈಲು ದೂರವುಳ್ಳ ಸುರಂಗ ಮಾರ್ಗವನ್ನು ನೋಡಿದ್ದೇನೆ ನಾನು.

ಬೆಂಕಿಕಡ್ಡಿಯ ಕಾರ್ಖಾನೆಗಳೋ ನೋಡುವುದಕ್ಕೆ ಒಂದು ಅಂದ. ಅದೇ ಒಂದು ನೋಟ. ತಮ್ಮ ದೇಶಕ್ಕೆ ಬೇಕಾದ ಪ್ರತಿಯೊಂದನ್ನೂ ತಯಾರಿಸಬೇಕೆಂಬುದು ಅವರ ಹಟ. ಚೀಣಾಕ್ಕೂ ಜಪಾನಿಗೂ ಮಧ್ಯೆ ಓಡಾಡುವ ಜಪಾನೀಯ ಜಹಜುಗಳ ಸಾಲೊಂದಿರುವುದು.

ನಾನೆಷ್ಟೋ ದೇವಾಲಯಗಳನ್ನು ನೋಡಿದೆನು. ಪ್ರತಿಯೊಂದು ದೇವಸ್ಥಾನದಲ್ಲಿಯೂ ಪ್ರಾಚೀನ ವಂಗಭಾಷೆಯ ಅಕ್ಷರದಲ್ಲಿ ಬರೆದ ಸಂಸ್ಕೃತ ಮಂತ್ರಗಳಿರುವುವು. ದೇವಸ್ಥಾನದ ಅರ್ಚಕರಲ್ಲಿ ಕೆಲವರಿಗೆ ಮಾತ್ರವೇ ಸಂಸ್ಕೃತ ಭಾಷಾ ಪರಿಚಯವಿರುವುದು. ಆದರೂ ಅವರು ಬಲು ಬುದ್ಧಿಶಾಲಿಗಳು. ಏಳಿಗೆಯನ್ನೈದಬೇಕೆಂಬ ಉತ್ಸಾಹವು ಈ ದೇವಸ್ಥಾನಗಳ ಪೂಜಾರಿಗಳಿಗೂ ಹತ್ತಿರುವುದು. ಈ ಜಪಾನೀಯರ ವಿಷಯವಾಗಿ ನನ್ನ ಮನಸದಲ್ಲಿರುವುದನ್ನೆಲ್ಲಾ ಒಂದು ಸಣ್ಣ ಪತ್ರದಲ್ಲಿ ಅಡಗಿಸಲಾರೆನು. ಪ್ರತಿಯೊಂದು ಸಂವತ್ಸರವೂ ನಮ್ಮ ದೇಶದ ಯುವಕರನೇಕರು ಜಪಾನ್ ದ್ವೀಪ ಯಾತ್ರೆಯನ್ನು ಮಾಡಬೇಕೆಂಬುದೇ ನನ್ನ ಬಯಕೆ. ಪೃಥ್ವಿಯಲ್ಲಿ ಸಾರ ಮತ್ತು ಶ್ರೇಷ್ಠವಾದವುಗಳಿಗೆಲ್ಲಾ ಭಾರತವರ್ಷವು ತೌರುಮನೆ ಎಂಬುದೇ ಈಗಲೂ ಜಪಾನಿಯರ ಭಾವನೆ. ಆದರೆ ನೀವೋ! ನೀವೇನು! ಹೇಗಿದ್ದೀರಿ! ಕೆಲಸಕ್ಕೆ ಬಾರದ ಬರೀ ಮಾತಿನವರು ನೀವು.

ಇಲ್ಲಿ ಬಂದು ನೋಡಿ ಹಿಂದಿರುಗಿ ನಾಚಿಕೆಗೆ ನಿಮ್ಮ ಮುಖಗಳನ್ನು ಮುಚ್ಚಿಕೊಳ್ಳಿರಿ. ನೀವೆಲ್ಲರೂ ಅರಳುಮರಳು ಮುದುಕರು. ಹೊರಗೆ ಹೋದರೆ ನಿಮ್ಮ ಜಾತಿಯು ಕೆಡುವುದಲ್ಲವೆ! ನೂರಾರು ವರ್ಷಗಳಿಂದ ಎಡೆಬಿಡದೆ ಹೆಚ್ಚಿ ಬೆಳೆದು ಕಲ್ಲಾದ ಮೂಢ ವಿಶ್ವಾಸವೆಂಬ ಹೊರೆಯನ್ನು ತಲೆಯ ಮೇಲೆ ಹೊತ್ತು, ನೂರಾರು ವರ್ಷಗಳು ಈ ಆಹಾರ ಮುಟ್ಟಲು ಯೋಗ್ಯವೋ, ಅದು ಸ್ಪರ್ಶಮಾಡಲು ಅಯೋಗ್ಯವೋ ಎಂಬ ದೊಡ್ಡ ವಿಷಯದ ವಿಚಾರದಲ್ಲಿ ನಿಮ್ಮ ಬುದ್ಧಿಶಕ್ತಿಗಳನ್ನು ವ್ಯಯಮಾಡಿ, ಯುಗಗಳ ಗಟ್ಟಲೆಯಾಗಿ ಸಂತತ ಸಾಮಾಜಿಕ ಪೀಡನದಿಂದ ನಿಮ್ಮ ಮಾನವತ್ವವನ್ನೆಲ್ಲಾ ಹೋಗಲಾಡಿಸಿಕೊಂಡು–ನೀವೇನಯ್ಯ ನೀವು! ನಿಮ್ಮ ಅವಸ್ಥೆ ಏನಯ್ಯ! ನಿಮ್ಮ ಬಾಳನ್ನು ಏನೆಂದು ಬಣ್ಣಿಸುವ! ನೀವೇನಯ್ಯ ಮಾಡುತ್ತಿದ್ದೀರಿ? ಪುಸ್ತಕಹಸ್ತರಾಗಿ ಸಮುದ್ರ ಕರೆಯಮೇಲೆ ಅಲೆಯುತ್ತಲೂ, ನಿಮ್ಮ ಸ್ವಂತವಲ್ಲದ ಪಾಶ್ಚಾತ್ಯರ ಬರವಣಿಗೆಗಳಲ್ಲಿ ಇಲ್ಲೊಂದ ಲ್ಲೊಂದನ್ನು ವಮನಮಾಡುತ್ತಲೂ, ಮನಸ್ಸನ್ನೆಲ್ಲಾ ಮಾಸಕ್ಕೆ ಸರಿಯಾಗಿ ಮೂವತ್ತು ರೂಪಾಯಿತಲಬಿನ ಮುತ್ಸದ್ದಿಯ ಕೆಲಸದ ಮೇಲೆಯೋ ಅಲ್ಲವೇ ಲಾಯರಾಗಬೇಕೆಂಬ ಆಲೋಚನೆಯ ಮೇಲೆಯೋ ನಿಲ್ಲಿಸಿ, ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ಕಾಲುಗಳ ಹಿಂದೆ ಹಸಿದು ಹಿಟ್ಟಿಗೆ ಬಡಿದುಕೊಳ್ಳುವ ಒಂದು ಹಿಂಡು ಮಕ್ಕಳನ್ನಿಟ್ಟುಕೊಂಡು, ಅಯ್ಯೋ! ನಿಮ್ಮ ಬದುಕೆ! ನಿಮ್ಮನ್ನೂ ನಿಮ್ಮ ಪುಸ್ತಕಗಳನ್ನೂ ನಿಮ್ಮ ಆಂಗ್ಲೇಯ ಪಾಂಡಿತ್ಯ ಸೂಚಕವಾದಂಥ ವಿಶ್ವವಿದ್ಯಾಲಯದ ಗೌರವದ ನಿಲುವಂಗಗಳನ್ನೂ (University gowns) ನಿಮ್ಮ ಯೋಗ್ಯತಾ ಪತ್ರಗಳನ್ನೂ ಮುಳುಗಿಸುವಷ್ಟು ನೀರು ಸಮುದ್ರದಲ್ಲಿಲ್ಲವೇನಯ್ಯ? ಹೊರಗೆ ಬನ್ನಿರಿ, ನಿಮ್ಮ ಗಂಡಸುತನವನ್ನು ತೋರಿಸಿರಿ. ಭಾರತವರ್ಷದ ಪುರೋವೃದ್ಧಿಗೆ ವಿಘ್ನಪ್ರಾಯರಾಗಿರುವ ಪುರೋಹಿತರನ್ನೆಲ್ಲಾ ಹೊಡೆದಟ್ಟಿ! ಏಕೆ ಎನ್ನುವಿರೋ! ಅವರು ಕಡುಮೂರ್ಖರು. ಅವರ ಹೃದಯಗಳೆಂದೂ ಅಗಲವಾಗವು. ಶತಮಾನಗಳಿಂದ ಸಾಗಿ ಬಂದ ಮೂಢಭಕ್ತಿ ಮತ್ತು ಕಿರುಕುಳದ ಮಕ್ಕಳಯ್ಯ ಅವರು. ಬನ್ನಿ, ಗಂಡಸರಾಗಿರಿ! ನಿಮ್ಮ ಸಣ್ಣ ಬಿಲಗಳನ್ನು ಬಿಟ್ಟು ಈಚಿಗೆ ಬಂದು ಹೊರಗಣ ವಿಶಾಲ

ವನ್ನು ನೋಡಿರಿ. ನಿಮಗೆ ಮಾನವರಲ್ಲಿ ಪ್ರೇಮವುಂಟೇನು? ಸ್ವದೇಶ ದಲ್ಲಿ ಪ್ರೀತಿಯುಂಟೇನು? ಇರುವ ಪಕ್ಷಕ್ಕೆ ಹೊರಗೆ ಬನ್ನಿರಿ. ಮಹತ್ತ್ರರವಾದ ಕಾರ್ಯಗಳನ್ನು ನೆರವೇರಿಸಲು ಶ್ರಮಪಡುತ ಹಿಂದೆ ನೋಡಬೇಡಿರಿ. ನಿಮಗೆ ಅತ್ಯಂತ ಪ್ರಿಯರು, ಅತ್ಯಂತ ಸಮಾಪವರ್ತಿಗಳು ಅತ್ತರೂ ಹಿಮ್ಮೊಗರಾಗಬೇಡಿರಿ. ನಿಮ್ಮ ಕಣ್ಣುಗಳೆಲ್ಲಾ ಮುಂದಿರಲಿ.

ಭಾರತಮಾತೆಗೆ ಕನಿಷ್ಠಪಕ್ಷ ಸಹಸ್ರ ನರರ ಬಲಿ ಬೇಕು—ನರರು, ಪಶುಗಳಲ್ಲ. ನಿಮ್ಮ ಚಳವಳಿ ನಿಂತುಹೋದ ಸಭ್ಯತೆಯನ್ನೂ ನಾಗರಿಕತೆಯನ್ನೂ ಭಂಗಪಡಿಸುವ ಆಯುಧವಾಗಿ ದೇವರೇ ಆಂಗ್ಲೇಯರನ್ನು ಇಲ್ಲಿಗೆ ಬರಮಾಡಿರುವನು. ಆಂಗ್ಲೇಯರಿಗೆ ಮೊಟ್ಟಮೊದಲು ಇಲ್ಲಿ ಜಾಗ ಕೊಟ್ಟವರು ಮದರಾಸಿಗಳು. ಬಡವರಲ್ಲಿ ಅನುತಾಪವನ್ನೂ, ಹಸಿದಿರುವ ಹೊಟ್ಟೆಗೆ ಹಿಟ್ಟನ್ನೂ, ಜನಸಾಮಾನ್ಯಕ್ಕೆ ತಿಳುವಳಿಕೆಯನ್ನೂ ಕೊಡುವಂತಹ ನೂತನ ಅವಸ್ಥೆಯನ್ನು ಉಂಟುಮಾಡುವುದಕ್ಕಾಗಿಯೂ, ನಿಮ್ಮ ಹಿಂದಣವರ ಕಿರುಕುಳದಿಂದ ಪಶುಗಳ ಸಮಕ್ಕೆ ಇಳಿದಿರುವವರನ್ನು ಮಾನವರನ್ನಾಗಿ ಮಾಡುವುದಕ್ಕಾಗಿಯೂ ಪ್ರಾಣ ಹೋಗುವ ಪರ್ಯಂತ ಹಿಂಜರಿಯದೆ ಹೋರಾಡತಕ್ಕಂಥ ಸ್ವಾರ್ಥತ್ಯಾಗಿಗಳಾದ ಯುವಕರೆಷ್ಟು ಮಂದಿಯನ್ನು ಕೊಡುವುದಕ್ಕೆ ಮದರಾಸು ಸಿದ್ಧವಾಗಿರುವುದೀಗ?

ಇತಿ,

ವಿವೇಕಾನಂದ.

ತಾ. ಕ.—ಧೀರ, ನಿಸ್ತಬ್ಧ ಇನ್ನೂ ದೃಢಭಾವದಲ್ಲಿ ಕಾರ್ಯವು ಜರುಗಬೇಕು. ವರ್ತಮಾನ ಪತ್ರಿಕೆಗಳ ಬೂಟಾಟಿಕೆ ಹೆಸರುವಾಸಿ— ಇವುಗಳು ಕೂಡದು—ಸರ್ವದಾ ನೆನಪಿಸಲ್ಲಿಡತಕ್ಕುದು ಇದೀಗ.

ಬ್ರೀಸಿ ಮೆಡೋಸ್,
ಮೆಟ್ಕಾಫ್, ಮ್ಯಾಸಚುಸೆಟ್ಸ್,
೨೦ನೇ ಆಗಸ್ಟ್, ೧೮೯೩.

ನಿನ್ನ ಪತ್ರವು ನಿನ್ನೆ ಕೈಸೇರಿತು. ಜಪಾನಿನಿಂದ ನಿನಗೆ ನಾನು ಬರೆದ ಪತ್ರವು ಸೇರಿರಬಹುದು ಈ ವೇಳೆಗೆ. ಜಪಾನಿನಿಂದ ಉತ್ತರಪೆಸಿಫಿಕ್ ಸಾಗರ ಮಾರ್ಗವಾಗಿ ವಾಂಕುವರಿಗೆ ಬಂದೆನು.

ಸಹಿಸಲಾರದ ಚಳಿ. ಬೆಚ್ಚನೆಯ ಬಟ್ಟೆಗಳಿಲ್ಲದೆ ಬಹು ಶ್ರಮಪಟ್ಟೆನು. ಅಂತೂ ವಾಂಕೂವರಿಗೆ ಬಂದೆನು. ಅಲ್ಲಿಂದ ಕೆನಡ ಮಾರ್ಗವಾಗಿ ಷಿಕಾಗೋ ಮುಟ್ಟಿದೆನು. ಷಿಕಾಗೋದಲ್ಲಿ ಹನ್ನೆರಡು ದಿನಗಳಿದ್ದೆನು. ಆ ಹನ್ನೆರಡು ದಿನಗಳೂ ತಪ್ಪದೆ ಆ ಉತ್ಸವಕ್ಕೆ ಹೋಗಿದ್ದೆ. ಆ ಉತ್ಸವವನ್ನು ವರ್ಣಿಸುವುದು ಅಸಾಧ್ಯ. ಅದನ್ನೆಲ್ಲಾ ನೋಡುವುದಕ್ಕೆ ಕೊನೆಯಪಕ್ಷ ಹತ್ತು ದಿವಸಗಳಾದರೂ ಬೇಕು.

ಬಿ........ಅವರು ಪರಿಚಯಮಾಡಿಸಿ ಕೊಟ್ಟ ಸ್ತ್ರೀಯೂ, ಆಕೆಯ ಯಜಮಾನರೂ ಷಿಕಾಗೋ ಸಮಾಜದಲ್ಲಿ ಮಹಾಗಣ್ಯರು, ನನಲ್ಲಿ ಬಹಳ ಆದರಣೆಯನ್ನು ತೋರಿಸಿದರವರು. ಆದರೂ ಇಲ್ಲಿನವರು ಅನ್ಯದೇಶೀಯರಲ್ಲಿ ಇಷ್ಟು ಆದರಣೆಯನ್ನು ತೋರಿಸುವುದು ಇತರರಿಗೆ ತಮಾಷೆ ತೋರಿಸುವುದಕ್ಕಾಗಿ. ಕಾಸು ಬಿಚ್ಚುವ ಸಮಯ ಬಂದರೆ ಕೈ ಮುಚ್ಚಿಹೋಗುವುದು. ಇಲ್ಲಿ ಈ ಸಂವತ್ಸರವು ಒಳ್ಳೆಯದಲ್ಲ. ವ್ಯವಸಾಯದಲ್ಲಿ ಎಲ್ಲರೂ ಪೆಟ್ಟುತಿಂದಿರುವರು. ಅದುದರಿಂದ ನಾನು ಇಲ್ಲಿ ಹೆಚ್ಚು ದಿನಗಳಿರಲಿಲ್ಲ. ಷಿಕಾಗೋವಿನಿಂದ ಬೋಸ್ಟನ್‌ಗೆ ಬಂದೆನು. ಮ॥ ರಾ॥ ಲಾ.... ಬೋಸ್ಟನ್‌ವರಿಗೆ ನನ್ನೊಡನೆ ಇದ್ದರು. ಅವರೂ ನನ್ನಲ್ಲಿ ಬಹಳ ಆದರವನ್ನು ತೋರಿಸಿದರು.

ಇಲ್ಲಿ ನನ್ನ ಖರ್ಚು ನೋಡಿದರೆ ಭಯವಾಗುತ್ತದೆ. ನಿಮಗೆ ಜ್ಞಾಪಕವಿರಬಹುದು. ನೀವು ನನ್ನಲ್ಲಿ ೧೭೦ ಪೌಂಡುಗಳ ನೋಟನ್ನೂ ನಗದು ೯ ಪೌಂಡುಗಳನ್ನೂ ಕೊಟ್ಟಿದ್ದಿರಷ್ಟೆ. ಈಗ ನನ್ನಲ್ಲಿ ಉಳಿದಿರುವುದು

೧೨೦ ಪೌಡು ವರ್ಾತ್ರ, ಇಲ್ಲಿ ನನ್ನ ಖರ್ಚು ದಿನವೊಂದಕ್ಕೆ ಸರಾಸರಿ ೧ ಪೌಂಡು. ಒಂದು ಚುಟ್ಟಿಕ್ಕೆ ೮ ಆಣೆ ಬೆಲೆ ನಮ್ಮ ದೇಶದ ನಾಣ್ಯದಲ್ಲಿ. ಅಮೇರಿಕ ದೇಶದವರು ಹಣವನ್ನು ನೀರಿನಂತೆ ಖರ್ಚು ಮಾಡುವಷ್ಟು ಧನಿಕರು. ಇನ್ನು ಅವರು ನಿರ್ಬಂಧಗಳನ್ನು ಮಾಡಿ ಎಲ್ಲಾ ತರಹೆ ಸಾಮಾನುಗಳ ಬೆಲೆಯನ್ನು, ಈ ಭೂಮಂಡಲದಲ್ಲಿ ಇತರ ಜನಾಂಗದವರಾರೂ ತಮ್ಮ ಸರಿಸಮಾನಕ್ಕೆ ಬರಲಾರದಷ್ಟು ಹೆಚ್ಚಿಸಿದ್ದಾರೆ. ಸಾಮಾನ್ಯ ಕೂಲಿಯವನ ಸಂಪಾದನೆ ದಿನವೊಂದಕ್ಕೆ ಸರಾಸರಿ ೯ ಅಥವಾ ೧೦ ರೂ. ಇಲ್ಲಿಗೆ ಬರುವುದಕ್ಕೆ ಮುಂಚೆ ನಾವು ಕಂಡ ಚಿನ್ನದ ಕನಸುಗಳೆಲ್ಲಾ ಭಂಗವಾಗಿ, ಈಗ ನಾನು ಆಗಹೋಗದವುಗಳೊಡನೆ ಹೋರಾಡಬೇಕಾಗಿದೆ. ಈ ದೇಶವನ್ನು ಬಿಟ್ಟು ಇಂಡಿಯಾದೇಶಕ್ಕೆ ಹಿಂದಿರುಗೋಣವೆಂದು ಮನಸ್ಸು ಬಂದಿತು ನೂರಾರು ಸಾರಿ. ಆದರೆ ನನ್ನ ಹಟವೋ! ಭಗವಂತನಿಂದ ಆದಿಷ್ಟನಾಗಿದ್ದೇನೆ ನಾನು. ನನಗೇನೋ ದಾರಿಕಾಣದು. ಆದರೆ ಆತನ ಕಣ್ಣಿಗೆ ಎಲ್ಲವೂ ಸ್ಪಷ್ಟವೇ! ಬದುಕಲಿ ಸಾಯಲಿ ಬಿಡೆನು ನಾನು ಹಿಡಿದುದನ್ನು.

ಈಗ ನಾನು ಬೋಸ್ಟನ್ನಿಗೆ ಸಮೀಪದಲ್ಲಿರುವ ಒಂದು ಹಳ್ಳಿಯಲ್ಲಿ ವೃದ್ಧ ಸ್ತ್ರೀಯೊಬ್ಬಳ ಅತಿಥಿಯಾಗಿದ್ದುಕೊಂಡು ಇದ್ದೇನೆ. ಈಕೆಯ ಪರಿಚಯವು ನನಗೆ ರೈಲಿನಲ್ಲಿ ಹಟಾತ್ತಾಗಿ ದೊರಕಿತು. ಆಕೆ ತನ್ನ ಮನೆಯಲ್ಲೇ ಬಂದಿರಬಹುದೆಂದು ನನ್ನನ್ನು ಕರೆದಳು. ಆಕೆಯ ಮನೆಯಲ್ಲಿ ವಾಸಮಾಡುವದರಿಂದ ನನಗೇನೋ ಲಾಭ. ದಿನಕ್ಕೊಂದು ಪೌಂಡಿನ ಖರ್ಚುಮಿಗುತ್ತದೆ. ಆಕೆಯು ತನಗೆ ಬೇಕಾದವರನ್ನು ತನ್ನ ಮನೆಗೆ ಕರೆಯಿಸಿ, ಅವರಿಗೆ ಇಂಡಿಯದಿಂದ ಬಂದಿರುವ ಅಪೂರ್ವ ವಸ್ತುವನ್ನು ತೋರಿಸುವುದೇ ಆಕೆಗೆ ಪ್ರಯೋಜನ. ಇದೆಲ್ಲವನ್ನೂ ಸಹಿಸಿಕೊಳ್ಳಬೇಕಾಗಿದೆ. ಬರೀ ಹೊಟ್ಟೆ, ಚಳಿ, ನನ್ನ ಉಡುಪಿನ ವೈಚಿತ್ರ್ಯದಿಂದ ದಾರಿಹೋಕರ ಧಿಕ್ಕಾರ. ಇವುಗಳೊಡನೆ ನಾನು ಹೋರಾಡಬೇಕಾಗಿದೆ. ಆದರೆ ಎನ್ನ ಪ್ರಿಯವತ್ಸ! ಹೆಚ್ಚಾಗಿ ದುಡಿದಲ್ಲದೆ ಯಾವ ದೊಡ್ಡ ಕೆಲಸತಾನೇ ಆದೀತು?

ಈ ದೇಶ ಕಿರಸ್ತಾನರ ದೇಶ. ಇಲ್ಲಿ ಇತರ ಧರ್ಮ ಅಥವ ಮತದ ಪ್ರಭಾವವು ಇಲ್ಲವೆಂದೇ ಹೇಳಬೇಕು. ಜಗತ್ತಿನಲ್ಲಿ ಯಾವ ಸಂಪ್ರದಾಯದವರ ದ್ವೇಷದ ಭಯವೂ ನನಗಿಲ್ಲ. ಮೇರೀಸುತನ ಸಂತಾನ ಮಧ್ಯದಲ್ಲಿ ನಾನು ವಾಸವಾಗಿರಲು ಏಸು ಪ್ರಭುವೇ ನನಗೆ ಸಹಾಯಕನು. ಇಲ್ಲಿಯವರು ಹಿಂದೂ ಧರ್ಮ ಸಂಬಂಧವಾದ ಉದಾರ ಮತಗಳನ್ನೂ ನಾಸರತ್ ಅವತಾರ ಪುರುಷನಲ್ಲಿ ನನಗಿರುವ ಪ್ರೀತಿಯನ್ನೂ ನೋಡಿ ಅವರಿಗೆ ಮೆಚ್ಚುಗೆ. ಗ್ಯಾಲಿಲಿ ಮಹಾತ್ಮನಿಗೆ ವಿರೋಧವಾಗಿ ನಾನಾವುದನ್ನೂ ನುಡಿಯುವುದಿಲ್ಲವೆಂದೂ ಏಸು ಪ್ರಭುವಿನ ಜೊತೆಗೆ ಹಿಂದೂ ಮಹಾಪುರುಷರನ್ನು ಸನ್ಮಾನಿಸಬೇಕೆಂದೂ ನಾನು ಹೇಳುತ್ತೇನೆ. ಇದನ್ನು ಆದರ ಪೂರ್ವಕ ಗ್ರಹಿಸುತ್ತಾರೆ ಅವರು.

ಚಳಿಗಾಲ ಸಮಿಾಪಿಸುತ್ತ ಇದೆ. ನನಗೆ ಬಗೆಬಗೆ ಬೆಚ್ಚಗೆ ಹೊದಿಕೆ ಆವಶ್ಯಕ. ಇದು ನಮಗಿಂತಲೂ ಇಲ್ಲಿಯ ನಿವಾಸಿಗಳಿಗೆ ಹೆಚ್ಚಾಗಿ ಆವಶ್ಯಕವು. ಜೋಕೆ! ಎನ್ನ ವತ್ಸ, ಎದೆಗೊಳ್ಳು! ಇಂಡಿಯದಲ್ಲಿ ಮಹಾ ಕಾರ್ಯಗಳನ್ನು ನಾವು ಮಾಡಬೇಕೆಂಬುದು ದೈವೇಚ್ಛೆ. ನಂಬಿಕೆ ಇಡು. ನಾವು ಮಾಡಲೇ ಮಾಡುತ್ತೇವೆ. ನಮ್ಮಂತಹ ದರಿದ್ರರೂ ಧಿಕ್ಕೃತರಾದವರೇ ........

ಇಲ್ಲೊಂದು ತಮಾಷೆ ನಡೆಯಿತು ಕೆಲವು ದಿನಗಳ ಹಿಂದೆ. ........ ರಾಜನಿಲ್ಲಿದ್ದಾನೆ. ಷಿಕಾಗೋ ಸಾಮಾಜಿಕರಲ್ಲಿ ಕೆಲವರು ಈತನನ್ನು ಅತಿಯಾಗಿ ಗೌರವಿಸುತ್ತಿದ್ದರು. ಜಾತ್ರೆಯಲ್ಲಿ ಆತನ ಭೇಟಿ ನನಗೊಂದು ಸಾರಿ ಪ್ರಾಪ್ತವಾಯಿತು. ಆದರೆ ನನ್ನಂತಹ ಬಡ ಫಕೀರನೊಡನೆ ರಾಜನಿಗೆ ಮಾತೆಲ್ಲಿಯದು! ಉಗುರಿನಿಂದ ಬರೆದ ಚಿತ್ರಪಟಗಳನ್ನು ಮಾರುತ ಧೋತ್ರವುಟ್ಟುಕೊಂಡಿದ್ದ ಖಯಾಲಿಯಾದ ಮಹಾರಾಷ್ಟ್ರ ಬ್ರಾಹ್ಮಣನೊಬ್ಬನಿದ್ದನಲ್ಲಿ. ಈ ವ್ಯಕ್ತಿಯು ಪತ್ರಿಕಾವೃತ್ತಾಂತ ನಿವೇದಕರೊಡನೆ ರಾಜನಿಗೆ ವಿರೋಧವಾಗಿ ಏನೇನೋ ಹೇಳಿಬಿಟ್ಟನು. 'ರಾಜನು ಕೀಳು ಜಾತಿಯವನು. ಇಂತಹ ರಾಜರು ರಾಜರಲ್ಲ. ಅವರು ನಿಜವಾಗಿಯೂ ಗುಲಾಮರು. ಅವರು ಸಾಮಾನ್ಯವಾಗಿ ವ್ಯಭಿಚಾರಿಗಳು' ಎಂದು

ಮುಂತಾಗಿ. ತರುವಾಯ ಈ ಪತ್ರ್ಯಸಂಧರಿವ್ಯಾರಲಲ್ಲಿ ಪತ್ರಿಕಾ ಸಂಪಾದಕರು (ಅಮೆರಿಕದಸಂಪಾದಕರು ಪ್ರಸಿದ್ಧರು) ಈ ಮಾತುಗಳಿಗೆ ಕೊಂಚ ತೂಕಕೊಟ್ಟು ಮರುದಿವಸ ತಮ್ಮ ಪತ್ರಿಕೆಗಳಲ್ಲಿ ಇಂಡಿಯದಿಂದ ಬಂದಿರುವ ಜ್ಞಾನಿಯೋರ್ವನನ್ನು ಎಂದರೆ ನನ್ನನ್ನು ವಿವರಿಸಿ ಅತಿಯಾಗಿ ಸ್ತೋತ್ರಮಾಡಿ, ನಾನು ಕನಸಿನಲ್ಲಿಯೂ ಕೂಡ ಹೇಳದ ಮಾತುಗಳು ನನ್ನ ಬಾಯಿಂದ ಹೊರಟುವೆಂದು ದೀರ್ಘಲೇಖನಗಳನ್ನು ಪ್ರಕಟಿಸಿದರಲ್ಲದೆ ಈ ರಾಜನ ವಿಷಯವಾಗಿ ಮಹಾರಾಷ್ಟ್ರ ಬ್ರಾಹ್ಮಣನು ನುಡಿದುದೆಲ್ಲವೂ ನನ್ನ ಬಾಯಿಂದ ಹೊರಟುವೆಂದು ತಿಳಿಸಿದರು. ಇದರಿಂದ ರಾಜನ ಮುಖಕ್ಕೆ ಮಸಿ ಬಳಿದಂತಾಗಿ ಷಿಕಾಗೋ ಸಾಮಾಜಿಕರು ರಾಜನನ್ನು ತಿರಸ್ಕರಿಸಿ ದೂರಮಾಡಿದರು ಬಲುಬೇಗ. ನನ್ನ ದೇಶಬಂಧುವಿನ ಮುಖಕ್ಕೆ ಮಸೀ ಬಳಿಯುವುದಕ್ಕೆ ಇಲ್ಲಿಯ ಪತ್ರಿಕಾ ಸಂಪಾದಕರು ನನ್ನನ್ನು ಉಪಯೋಗಿಸಿದರು. ಈ ದೇಶದಲ್ಲಿ ಹೊನ್ನು ಹೆಸರುಗಳಿಗಿಂತಲೂ ಬುದ್ಧಿಗೆ ಪ್ರಾಶಸ್ತ್ಯ ಹೆಚ್ಚೆಂಬುದು ವ್ಯಕ್ತವಾಗುತ್ತದೆ.

ನಿನ್ನೆ ಇಲ್ಲಿ ಹೆಂಗಸರ ಕಾರಾಗೃಹದ ಸ್ತ್ರೀ ವಿಚಾರಣಕರ್ತಳು ಬಂದಿದ್ದಳು. ಇಲ್ಲಿ ಕಾರಾಗೃಹವೆಂದು ಕರೆಯುವುದಿಲ್ಲ. ದೋಷನಿವೃತ್ತಿಯಾಗುವ ಮನೆಯೆಂದು ಕರೆಯುತ್ತಾರೆ. ನಾನು ಅಮೆರಿಕದಲ್ಲಿ ನೋಡಿದ್ದುದರಲ್ಲೆಲ್ಲಾ ಅತ್ಯಂತ ಅದ್ಭುತವಾದುದು. ಅಲ್ಲಿರುವವರನ್ನು ಎಷ್ಟು ಕನಿಕರದಿಂದ ಕಂಡು ಅವರ ದೋಷಗಳನ್ನು ಹೋಗಲಾಡಿಸಿ, ಅವರು ಪುನಃ ಪ್ರಪಂಚವನ್ನು ಸೇರುವಂತೆ ಮಾಡಲು ಎಷ್ಟು ಶ್ರಮ ಪಡುವರಯ್ಯ! ಅವರ ಏರ್ಪಾಡುಗಳು ಎಷ್ಟು ಅದ್ಭುತ! ಎಷ್ಟು ಸೊಗಸು! ನೋಡಿದಲ್ಲದೆ ನಂಬಿಕೆಯುಂಟಾಗದು. ಅಯ್ಯಾ! ನಮ್ಮ ಭಾರತವರ್ಷದಲ್ಲಿ ದರಿದ್ರದೀನರನ್ನು ಕುರಿತು ನಮ್ಮ ಮನೋಭಿಪ್ರಾಯವನ್ನು ನೆನೆದು ಬಲು ನೊಂದನಯ್ಯ. ಉಪಾಯ ಯಾವದೂ ಇಲ್ಲ ಅವರಿಗೆ! ತಪ್ಪಿಸಿಕೊಳ್ಳಲು ಮಾರ್ಗವಾವುದೂ ಇಲ್ಲ ಅವರಿಗೆ. ಅವಕಾಶವೇ ಇಲ್ಲವಯ್ಯಾ ಅವರು ಮೇಲೆ ಹೋಗಲು. ಭಾರತವರ್ಷದ ದರಿದ್ರನಿಗೂ ದೀನನಿಗೂ, ಪತಿತನಿಗೂ ಸ್ನೇಹಿತರೂ, ಹಿತಚಿಂತಕರೂ ಆರೂ ಇಲ್ಲ. ಅವರೆಷ್ಟು ಪ್ರಯತ್ನಪಟ್ಟರೂ ಮೇಲೆ ಏಳರು. ಪಾತಾಳದಲ್ಲಿ ಪ್ರತಿ

ದಿವಸವೂ ಇನ್ನೂ ಕೆಳಗೆ ಹೋಗುತ್ತಿರುವರು. ಶಿರದ ಮೇಲೆ ಮಳೆ ಯಂತೆ ಬೀಳುವ ಕ್ರೂರಸಮಾಜದ ಪೆಟ್ಟುಗಳನ್ನು ತಿನ್ನುತ ಅವ ಬರುವ ದಿಕ್ಕನ್ನರಿಯರಯ್ಯ. ತಾವು ಮನುಷ್ಯರೆಂಬುದನ್ನೇ ಮರೆತಿರುವರು. ದಾಸ್ಯವೇ ಇದರ ಫಲ. ಈಚೀಚೆಗೆ ಚಿಂತಾಶೀಲರು ಈ ಎದೆ ಬಿಚ್ಚುವ ಸ್ಥಿತಿಯನ್ನು ನೋಡಿರುವರು. ಆದರೆ ಈ ಹೀನಸ್ಥಿತಿಗೆ ಹಿಂದೂಮತವೇ ಕಾರಣವೆಂದು ಅನ್ಯಾಯವಾಗಿ ಎಣಿಸಿ ಪೃಥ್ವಿಯಲ್ಲೆಲ್ಲಾ ಸರ್ವೋತ್ಕೃಷ್ಟವು ವಾದ ಧರ್ಮವನ್ನು ಸುಜ್ಜುಗುಜ್ಜು ಮಾಡುವುದೇ ಮಾರ್ಗವೆಂದು ಅಭಿ ಪ್ರಾಯಪಡುವರು. ಕೇಳ್ವಿ ಸಖನೇ! ಭಗವದನುಗ್ರಹ ಬಲದಿಂದ ಇದರ ಗುಟ್ಟನ್ನು ಕಂಡುಹಿಡಿದಿದ್ದೇನೆ ನಾನು. ಇದು ಹಿಂದೂಧರ್ಮದ ತಪ್ಪಲ್ಲ. 'ನೀನೊರ್ವನೇ ಅನೇಕವಾಗಿ, ಸರ್ವಭೂತಗಳೂ ನೀನೇ ಆಗಿರುವ' ಎಂದು ಹಿಂದೂಧರ್ಮವು ಘೋಷಿಸುತ್ತಿರುವಲ್ಲಿ, ಈ ಮಹಾ ಸಿದ್ಧಾಂತ ವನ್ನು ಆಚರಣೆಯಲ್ಲಿ ತಾರದೆ ಇದ್ದುದೂ, ಜನಗಳಲ್ಲಿ ಪರಸ್ಪರ ಅನು ತಾಪ ಕಡಮೆಯಾದುದೂ, ಕನಿಕರವಿಲ್ಲದೇ ಹೋದುದೂ ಇವೇ ಕಾರಣ. ಈ ಅವಸ್ಥೆಯನ್ನು ನೋಡಿ ಸಹಿಸಲಾರದೆ ಸಾಕ್ಷಾತ್ ಭಗ ವಂತನೇ ಬೌದ್ಧಾವತಾರವನ್ನೆತ್ತಿ ದರಿದ್ರರಲ್ಲಿಯೂ ಕಷ್ಟಪರಂಪರೆಗಳಲ್ಲಿ ಸಿಲುಕಿ ನರಳುವವರಲ್ಲಿಯೂ ಪಾಪಿಗಳಲ್ಲಿಯೂ ಕನಿಕರ ಹುಟ್ಟಿಸುವ ಮಾರ್ಗವನ್ನು ತೋರಿದನು. ಆದರೆ ಅವನ ಮಾತುಗಳಿಗೆ ಕಿವಿಗೊಡದೆ, ನಿಮ್ಮ ಪುರೋಹಿತರು ರಾಕ್ಷಸರನ್ನು ಸುಳ್ಳು ಸಿದ್ಧಾಂತಗಳಿಂದ ಮೋಹ ಗೊಳಿಸುವುದಕ್ಕಾಗಿ ಹುಟ್ಟಿದನೆಂಬ ಘೋರವಾದೊಂದು ಕಥೆಯನ್ನು ಕಲ್ಪನೆಮಾಡಿದರು. ಸತ್ಯವೇ ಸರಿ. ಆದರೆ ಅಸುರರು ಯಾರು? ನಾವೇ, ಅವನ ಮಾತನ್ನು ನಂಬಿದವರಲ್ಲ. ಎಹುದೀಯರು ಹೇಗೆ ಏಸುಪ್ರಭು ವನ್ನು ತಿರಸ್ಕರಿಸಿದಂದಿನಿಂದ ಮನೆಮಠವಿಲ್ಲದ ತಿರುಕರಂತೆ ಎಲ್ಲರಿಂದಲೂ ಪೀಡಿತರಾಗಿ ತಿರಸ್ಕೃತರಾಗಿ ಜಗತ್ತಿನಲ್ಲಿ ಅಲೆಯುತ್ತಿದ್ದಾರೋ ಅದರಂತೆ ನಿಮ್ಮ ಪರಿ. ಬೇಕಾದವರು ಒಂದು ನಿಮ್ಮನ್ನು ಹೊಡೆದು ಬಡೆದು ಒದೆದು ಅರೆದು ಗುಲಾಮರನ್ನಾಗಿ ಮಾಡುತ್ತಿದ್ದಾರೆ. ಅಹ! ಅತ್ಯಾಚಾರರೇ! ನಿಮಗೆ ತಿಳಿಯದು. ಅತ್ಯಾಚಾರವೂ ಗುಲಾಮಗಿರಿಯೂ ಒಂದೇ ಜಿನಸು. ಒಂದು ಮುಂದು, ಒಂದು ಹಿಂದು, ಎರಡೂ ಸಮಾನಶಬ್ದಗಳು.

ಬಾ.......ಜಿ ಅವರಿಗೆ ಜ್ಞಾಪಕವಿರಬಹುದು. ಪುದುಚೇರಿಯಲ್ಲಿ ಒಂದಾನೊಂದು ಸಾಯಂಕಾಲ ಪಂಡಿತನೊರ್ವನೊಡನೆ ನಾನು ಸಮುದ್ರಯಾನಸಂಬಂಧವಾಗಿ ತರ್ಕವಿತರ್ಕಗಳನ್ನು ಮಾಡುತ್ತಿದ್ದೆನು. ಆತನು ಆಗ ತೋರಿದ ಭಂಗೀಕೋರನ ಅಭಿನಯಗಳನ್ನೂ ಕದಾಪಿನಾ (ಎಂದೆಂದಿಗೂ) ಇಲ್ಲವೆಂದು ನುಡಿದುದನ್ನೂ ನಾನೆಂದೂ ಮರೆಯೆನು. ಅಯ್ಯೋ ಪಾಪ! ಈ ಭಾರತವರ್ಷವು ಪ್ರಪಂಚದಲ್ಲಿ ಎಲ್ಲೋ ಒಂದು ಅತ್ಯಲ್ಪ ಭಾಗವೆಂಬುದನ್ನೂ, ಇಲ್ಲಿಯ ಮೂವತ್ತುಕೋಟಿ ಪ್ರಜೆಗಳನ್ನು ಲೋಕವೆಲ್ಲ ಈ ಸೊಗಸಾದ ಭೂಮಿಯಮೇಲೆ ಹರಿಯುತ ಒಂದನ್ನೊಂದು ಪೀಡಿಸುವುದಕ್ಕೆ ಪ್ರಯತ್ನಪಡುತ್ತಿರುವ ಕೀಟಗಳಿಗೆ ಸಮಾನವೆಂದು ಅತಿ ತುಚ್ಛವಾಗಿ ಎಣಿಸುತ್ತಾರೆಂಬುದನ್ನೂ ಅವರರಿಯರು. ಈ ಸ್ಥಿತಿಯನ್ನು ದೂರಮಾಡಬೇಕು. ಹೇಗೆಂದರೆ ಧರ್ಮನಾಶದಿಂದಲ್ಲ; ಆದರೆ ಹಿಂದೂಧರ್ಮದ ಮಹೋಪದೇಶಗಳನ್ನು ಅನುಸರಿಸೋಣದರಿಂದಲೂ, ಅದರೊಡನೆ ಹಿಂದೂಧರ್ಮದ ಸ್ವಾಭಾವಿಕ ಪರಿಣತಿ ಸ್ವರೂಪವಾದ ಬೌದ್ಧಧರ್ಮದ ಅದ್ಭುತ ಸಹಾನುಭೂತಿಯನ್ನು ಯೋಜನಮಾಡುವುದರಿಂದಲೂ.

ಚಿತ್ತಶುದ್ಧಿಯಿಂದ ಉದ್ಭವಿಸುವ ಉತ್ಸಾಹದಿಂದ ತಪ್ತಹೃದಯರಾಗಿ ಭಗವಂತನಲ್ಲಿ ನಿರಂತರಭಕ್ತಿಪೂರಿತರಾಗಿ ದರಿದ್ರರಲ್ಲಿಯೂ, ಪತಿತರಲ್ಲಿಯೂ, ಭೂತಳದಲ್ಲಿ ಮೆಟ್ಟಲ್ಪಟ್ಟವರಲ್ಲಿಯೂ, ಅನುತಾಪೋದ್ರೇಕದಿಂದ ಸಿಂಹಪ್ರತಾಪವನ್ನು ತಾಳ್ದು ನೂರುಸಾಸಿರ ಪುರುಷರೂ, ಸ್ತ್ರೀಯರೂ ಭಾರತವರ್ಷದ ಎಲ್ಲಾ ಕಡೆಗಳಲ್ಲಿಯೂ, "ಸಕಲರಿಗೂ ವಿಮೋಚನವುಂಟು. ಸರ್ವರಿಗೂ ಸಹಾಯವುಂಟು. ಸಮಾಜಕ್ಕೆ ಏಳಿಗೆಯುಂಟು. ಸರ್ವಸಮತ್ವವುಂಟು" ಎಂಬ ಆಪ್ತವಾಕ್ಯವನ್ನು ಹೇಳುವರಯ್ಯಾ!

ಮಾನವತ್ವದ ಉತ್ಕೃಷ್ಟತೆಯನ್ನೂ ಮಹಿಮೆಯನ್ನೂ ಹಿಂದೂಧರ್ಮವು ಉನ್ನತ ಸರಣಿಯಲ್ಲಿ ಪ್ರಶಂಸಿಸುವಂತೆ ಮತ್ಯಾವ ಧರ್ಮವೂ ಮಾಡುವುದಿಲ್ಲ. ಆದರೆ ದರಿದ್ರ ದೀನರ ತಲೆಗಳನ್ನು ಹಿಂದೂಧರ್ಮವು

ಮೆಟ್ಟುವಂತೆ ಇನ್ನಾವುದೂ ಮೆಟ್ಟುವುದಿಲ್ಲ. ಇದು ಧರ್ಮದ ಶಸ್ತ್ರಲ್ಲ. ಪಾರಮಾರ್ಥಿಕ, ವ್ಯಾವಹಾರಿಕ ಸಿದ್ಧಾಂತಗಳೆಂಬ ಜನಗಳನ್ನರೆದು ತಿಕ್ಕುವ ಯಂತ್ರಗಳನ್ನು ಕಲ್ಪನೆಮಾಡಿದ ಹಿಂದೂಬಕವೃತ್ತರ ಎಂದರೆ ಅಪಾಥ ಭೂತಿಗಳ ಕಾರ್ಯವೆಂದು ಭಗವಂತನು ನನಗೆ ತೋರಿದ್ದಾನೆ.

ನಿರಾಶನಾಗದಿರು. ಶ್ರೀಕೃಷ್ಣನು ಗೀತೆಯಲ್ಲಿ ನುಡಿದಿರುವುದನ್ನೇ ನೆನಪಿಗೆ ತಂದುಕೊ. "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ." (ಕರ್ಮವನ್ನು ಮಾಡಲು ನಿನಗಧಿಕಾರವಿರುವುದೇ ವಿನಾ ಕರ್ಮಫಲಕ್ಕೆ ನಿನಗೆ ಅಧಿಕಾರವಿಲ್ಲ) ಎಲಾ ಹುಡುಗ! ನಡುವನ್ನು ಕಟ್ಟಿ ಸಿದ್ಧನಾಗು. ನಾನು ಹುಟ್ಟಿರುವುದು ಇದಕ್ಕಾಗಿಯೇ. ಕಷ್ಟಗಳನ್ನೂ ಹಿಂಸೆಗಳನ್ನೂ ಅನುಭವಿಸಿರುವವರನ್ನು ನೋಡಿರುವೆನಲ್ಲದೆ ನಾನೂ ಅನುಭವಿಸಿದ್ದೇನೆ. ಅತ್ಯಂತ ಪ್ರಿಯರೂ ಸಮೀಪವರ್ತಿಗಳೂ ಉಪವಾಸದಿಂದ ಸಾಯುವುದನ್ನು ನೋಡಿದ್ದೇನಯ್ಯಾ ನಾನು. ಯಾರು ನನ್ನನ್ನು ಧಿಕ್ಕರಿಸಿ ತಿರಸ್ಕರಿಸುತ್ತಾರೋ, ಅವರಲ್ಲಿ ನನಗಿರುವ ಅನುತಾಪಕ್ಕಾಗಿ ಅಪಹಾಸ್ಯ ಮಾಡಲ್ಪಟ್ಟು ನನ್ನ ನಂಬಿಕೆಯನ್ನು ಕಳೆದುಕೊಂಡಿದ್ದೇನಯ್ಯಾ! ಎಲಾ ವತ್ಸ! ಈ ಪ್ರಪಂಚವು ಕ್ಲೇಶಾಗಾರವಾಗಿರುವುದಲ್ಲದೆ ಮಹಾಪುರುಷರ ಶಿಕ್ಷಾಲಯು. ಇನ್ನೂ ಎಲ್ಲಕ್ಕೂ ಮೇಲಾದ ಮತ್ತು ನಮ್ಮ ಕಾಲುಗಳ ಮುಂದೆ ಪೃಥ್ವಿಯೆಲ್ಲಾ ಪುಡಿಪುಡಿಯಾದರೂ ಅಳ್ಳಾಡದಂತೆ ಅತ್ಯುತ್ಸಾಹವತ್ತಾದ ಅಯಃಸಂಕಲ್ಪದ ಕೃಷಿಗೂ, ಇದೇ ಪ್ರಪಂಚವೇ ಶಿಕ್ಷಾಲಯ ಯಾರು ನನ್ನ ವಿಷಯದಲ್ಲಿ ಕೆಟ್ಟ ಆಲೋಚನೆ ಮಾಡುತ್ತಾರೋ ಅಂತಹವರಿಗಾಗಿ ನಾನು ದುಃಖಪಡುತ್ತೇನೆ. ತಪ್ಪು ಅವರದಲ್ಲ. ಅವರ ಶಿಶುಗಳು. ಉನ್ನತ ಪದವಿಯಲ್ಲಿದ್ದರೂ ಗಣ್ಯರಾಗಿದ್ದರೂ ಅವರು ನಿಜವಾಗಿಯೂ ಶಿಶುಗಳು. ಭೋಜನ ಪಾನ ದ್ರವ್ಯಾರ್ಜನ ಸಂತಾನಾರ್ಜನ, ಇವೇ ಸಂಖ್ಯಾಕ್ರಮವಾಗಿ ಅವರ ದಿನಚರಿಯಾಗಿರುವಲ್ಲಿ ಅವರ ದೃಷ್ಟಿಗೆ ಅವರ ಮೂಗಿನ ಮೂರು ಮೊಳಕ್ಕೆ ಆಚೆ ಏನೂ ಕಾಣದು. ಇವುಗಳನ್ನುಳಿದು ಬೇರೆ ಏನನ್ನೂ ಅರಿಯರು. ಸುಖಾತ್ಮರು. ನಿದ್ರಾಭಂಗವೆಂಬುದೇ ಇಲ್ಲ ಅವರಿಗೆ. ಶತಮಾನಗಳ ಗುಲಾಮಗಿರಿ

ಫಲವಾದುದಾಗಿ, ಕ್ಲೇಶದಿಂದಲೂ ಭ್ರಷ್ಟತನದಿಂದಲೂ, ದಾರಿದ್ರ್ಯ ದಿಂದಲೂ ಹುಟ್ಟಿ ಭಾರತವರ್ಷವನ್ನೆಲ್ಲಾ ತುಂಬಿಕೊಂಡಿರುವ ಜನಗಳ ಗೋಳು ಸುಖಜೀವಿಗಳನ್ನು ಹ್ಯಾಗೆತಾನೆ ಕದಲಿಸೀತು! ಸಾಕ್ಷಾತ್ ಭಗವಂತನ ಪ್ರತಿಮೆ ಯನ್ನು ಹೊರೆ ಹೊರುವ ಮೃಗದ ಸಮಕ್ಕೆ ಇಳಿಸಿ ರುವಂಥ ಆ ದಿವ್ಯಮಾತೆಯ ಮೂರ್ತಿಯಾದ ಸ್ತ್ರೀಯನ್ನು ಮಕ್ಕಳು ಹಡೆವ ದಾಸಿಯ ಸ್ವರೂಪಕ್ಕೆ ತಂದಿರುವಂಥ, ಇನ್ನೂ ಬಾಳನ್ನೇ ಶಾಪ ವೆಂದು ಎಣಿಸುವಂತೆ ಮಾಡಿರುವಂಥ, ಯುಗಗಳ ಗಟ್ಟಳೆಯಾಗಿ ನಡೆದ ಮನೋಹಿಂಸೆಯನ್ನೂ ಕಾಯಹಿಂಸೆಯನ್ನೂ ಅವರು ಕನಸಿನಲ್ಲಿಯೂ ಕಾಣರು. ಇದನ್ನು ನೋಡಿ ಮರುಕಗೊಂಡು ಹೃದಯದಲ್ಲಿ ರಕ್ತ ಮಯ ಅಶ್ರುಧಾರೆಗಳನ್ನು ಸುರಿಸಿ ಈ ಘೋರಸ್ಥಿತಿಗೆ ಚಿಕಿತ್ಸೆ ಇರುವು ದೆಂದೂ ಆ ಚಿಕಿತ್ಸೆಯನ್ನು ಖರ್ಚೆಣಿಸದೆಯೂ ಪ್ರಾಣಹೋದರೂ ಸರಿಯೇ ಮಾಡಬೇಕೆಂದೂ ಸಿದ್ಧರಾಗಿರುವಂತಹವರೂ ಇರುವರು. ಸ್ವರ್ಗವೆಂಬುದು ಅಂಥವರ ರಾಜ್ಯವಲ್ಲವೇನಯ್ಯ! ಎನ್ನ ಸ್ನೇಹಿತರೇ! ಪ್ರತಿಕ್ಷಣವೂ ಸ್ವಲ್ಪ ವಿಷಬಿಂದುಗಳನ್ನು ಕಾರುವುದಕ್ಕೆ ಸಿದ್ಧರಾಗಿ ತುಚ್ಛವಾದ ಕ್ಷುದ್ರ ಕೀಟಗಳಿಗೆ ಸದೃಶರಾಗಿರುವ ಈ ನೀಚರ ಪ್ರಲಾಪವನ್ನು ಕೇಳು ವುದಕ್ಕೆ ಆ ಮಹಾಪುರುಷರಿಗೆ ಅವಕಾಶವಿಲ್ಲದಿರುವುದು ಸಹಜವಲ್ಲವೆ?

ಧನಿಕರೆಂದೆನಿಸಿಕೊಂಬುವವರನ್ನು ನಂಬಬೇಡಿರಿ. ಅವರು ಸತ್ತವ ರಂತೆ ಇರುವರೇ ವಿನಾ ಜೀವಂತರಲ್ಲ. ಶ್ರದ್ಧಾಭಕ್ತಿಗಳಿಂದೊಡಗೂಡಿದ ನಿನ್ನಂತಹ ಧೀರನಮೇಲೆ ನನ್ನ ಆಸೆಯಲ್ಲಾ ನೆಲಸಿರುವುದು ಭಗವಂತ ನಲ್ಲಿ ಭಕ್ತಿ ಇಡು. ಕ್ಲೇಶಪಡುವವರಲ್ಲಿ ಅನುತಾಪವನ್ನು ತೋರಿ ಭಗ ವತ್ಸಾಹಾಯ್ಯವನ್ನು ಬಯಸುವೆಯಾದರೆ ಅದು ಬಂದೇ ಬರುವುದು. ಹೃದಯದಲ್ಲಿ ಈ ಕೊರೆಯನ್ನೂ ಮನದಲ್ಲಿ ಈ ಚಿಂತೆಯನ್ನೂ ಹೊತ್ತು ದ್ವಾದಶವರ್ಷಗಳು ಧನಿಕರೂ ದೊಡ್ಡವರೂ ಎಂದು ಹೇಳಿಕೊಳ್ಳುವವರ ಮನೆಮನೆಗೆ ತಿರುಗಿ ಸಾಕಾಗಿ ಮನದಲ್ಲಿ ನೊಂದು ಅರ್ಧ ಪ್ರಪಂಚವನ್ನೇ ದಾಟಿ ಸಾಹಾಯ್ಯಾರ್ಥಿಯಾಗಿ ಈ ವಿಜಾತೀಯವಾದ ದೇಶವನ್ನು ಮುಟ್ಟಿರುವೆನು. ದೇವರು ದೊಡ್ಡವನು. ಆತನ ಸಹಾಯ ನನಗುಂ

ಟೆಂದು ಬಲ್ಲೆನು ನಾನು. ನಾನಿಲ್ಲಿ ಹಸಿವಿನಿಂದಾಗಲಿ ಅಲ್ಲವೇ ಚಳಿಯಿಂದಾಗಲಿ ಸತ್ತರೂ ಈ ಅನುತಾಪವೇ ಇನ್ನೂ ಬಡವರ ಪರವಾಗಿಯೂ ವಿದ್ಯಾಹೀನರಿಗಾಗಿಯೂ ಹಿಂಸೆಗಳನ್ನು ಅನುಭವಿಸುವವರಿಗಾಗಿಯೂ ಈ ಹೋರಾಟವೇ ನಿನ್ನಂತಹ ಎಳೇಪ್ರಾಯದವರಿಗೆ ನಾನು ಬಿಡುವ ಆಸ್ತಿ. ಆದುದರಿಂದ ಈ ಕ್ಷಣವೇ ಪಾರ್ಥಸಾರಥಿಯ ಗುಡಿಗೆ ಹೋಗಿ ದರಿದ್ರರೂ ದೀನರೂ ಆದ ಆ ಗೋಕುಲದ ಗೋಪರ ಸ್ನೇಹಿತನಾದಂಥ, ಗುಹಾಕನೆಂಬ ಚಂಡಾಲನನ್ನು ಕೂಡಾ ಆಲಿಂಗನೆಮಾಡಲು ಹಿಂಜರಿಯದೆ ಇದ್ದಂಥ ಮಹಾಪ್ರಭುಗಳ ಆಹ್ವಾನವನ್ನು ಅಲಕ್ಷ್ಯಮಾಡಿ ವೇಶ್ಯಾಂಗನೆಯ ಸತ್ಕಾರವನ್ನು ಸ್ವೀಕರಿಸಿ ಅವಳನ್ನು ಬೌದ್ಧಾವತಾರದಲ್ಲಿ ರಕ್ಷಿಸಿದಂಥ ಆ ಶ್ರೀಕೃಷ್ಣಪರಮಾತ್ಮನ ಮುಂದೆ ಸಾಷ್ಟಾಂಗವೆರಗಿ ಆರಮೋಲಣ ಪ್ರೇಮದಿಂದಲೂ, ಆತ ರಕ್ಷಣಾರ್ಥವಾಗಿಯೂ, ಆಗಾಗ್ಗೆ ಭೂತಳದಲ್ಲಿ ಅವತಾರವನ್ನೆತ್ತಿದನೋ, ಆ ದೀನರಿಗಾಗಿಯೂ ಆ ದರಿದ್ರರಿಗಾಗಿಯೂ ಆ ಕ್ಲೇಶಪೀಡಿತರಿಗಾಗಿಯೂ ನಿನ್ನ ಆಯುಃಪ್ರಮಾಣವನ್ನೆಲ್ಲಾ ಧಾರೆ ಎರೆದುಕೊಡು. ಪ್ರತಿದಿವಸವೂ ಪಾತಾಳದಲ್ಲಿ ಕೆಳಕೆಳಗೆ ಹೋಗುತಲಿರುವ ಮುವ್ವತ್ತುಮೂರು ಕೋಟಿ ಪ್ರಜೆಗಳ ಹಿತಕ್ಕಾಗಿ ನಿನ್ನ ಆಯುಃಪ್ರಮಾಣವನ್ನೆಲ್ಲಾ ವಿನಿಯೋಗಮಾಡುತ್ತೇನೆಂದು ಸಂಕಲ್ಪಮಾಡು.

ಒಂದು ದಿವಸದಲ್ಲಾಗುವ ಕಾರ್ಯವಲ್ಲ ಇದು. ದಾರಿಯಾದರೆ ಮರಣಾರವಾರ್ಣಭ ಎನೆಗೆಡಿಸ ವ ಮುಳ್ಳುಗಳಿಂದ ಕೂಡಿದುದು. ಆದರೆ ಆ ಪಾರ್ಥಸಾರಥಿಯೇ ನಮಗೆ ಸಾರಥಿಯಾಗಲು ಸನ್ನದ್ಧನಾಗಿದ್ದಾನೆ. ಇದನ್ನು ಬಲ್ಲೆವು ನಾವು. ಆತನ ಹೆಸರನ್ನು ಹಿಡಿದು ಆತನಲ್ಲಿ ಅನಂತ ವಿಶ್ವಾಸವನ್ನಿಟ್ಟು ಯುಗಾಂತರಗಳಿಂದ ಸಂಚಿತವಾಗಿ ಪರ್ವತೋಪಾದಿಯಲ್ಲಿ ಬಿದ್ದಿರುವ ಅನಂತ ದುಃಖರಾಶಿಯನ್ನು ಬೆಂಕಿಯಲ್ಲಿ ಸುಟ್ಟು ಬೂದಿಮಾಡುವ ಬನ್ನಿ! ಎನ್ನೊಡಹುಟ್ಟಿದವರೇ ಬನ್ನಿ. ಹಿಂಜರಿಯದೆ ಕೆಚ್ಚೆದೆಯೊಡನೆ ನಮ್ಮ ಕಣ್ಣುಗಳನ್ನುತೆರೆದು ಸ್ಪಷ್ಟವಾಗಿ ನೋಡೋಣ. ಕಾರ್ಯವಾದರೆ ಗುರುತರವಾದುದು. ನಮ್ಮ ಶಕ್ತಿಯೋ ಅತ್ಯಲ್ಪ. ಆದರೆ

ಬೆಳಕಿನ ಮಕ್ಕಳು ನಾವು. ಭಗವಂತನ ಶಿಶುಗಳು ನಾವು. ಸ್ವಾಮಿಯ ಮಹಿಮೆಯನ್ನು ಕೊಂಡಾಡೋಣ. ಕಾರ್ಯಸಿದ್ಧಿಯು ಆಗೇ ಆಗುತ್ತದೆ. ಈ ಹೋರಾಟದಲ್ಲಿ ನೂರಾರುಮಂದಿ ಸೋಲು ಪಡೆಯಬಹುದು. ಮರಳಿ ನೂರಾರು ವ್ಯಕ್ತಿಗಳೇಳುವರು. ನನ್ನ ಕಾರ್ಯ ಕೈಗೂಡದೆ ನಾನಿಲ್ಲಿ ಸಾಯಬಹುದು. ಭಾರವನ್ನು ಹೊರಲು ಮತ್ತೊಬ್ಬನೇಳು ವನು .ಜಾಡ್ಯದ ಪರಿ ಗೊತ್ತು ನಿನಗೆ. ಅದರ ಪ್ರತೀಕಾರವೂ ಗೊತ್ತು. ಆದರೆ ನಂಬಿಕೆ ಇಡು. ಹಣವಂತರೂ ದೊಡ್ಡವರೂ ಎಂದು ಭಾವಿಸಲ್ಪ ಡುವವರನ್ನು ನೆಚ್ಚಬೇಡ. ಹೃದಯಶೂನ್ಯರಾದ ಕೇವಲ ಮಸ್ತಿಷ್ಕ ವ್ಯಕ್ತಿ ಗಳನ್ನೂ ಅವರ ನಿಸ್ತೇಜವಾದ ಸಂವಾದ ಪತ್ರಪ್ರಬಂಧಾವಳಿಗಳನ್ನೂ ಮೂಲೆಗಿಡು. ವಿಶ್ವಾಸ, ಸಹಾನುಭೂತಿ, ಅಗ್ನಿಮಯ ವಿಶ್ವಾಸ, ಅಗ್ನಿಮಯ ಸಹಾನುಭೂತಿ. ಈ ಬಾಳೇನು! ಸಾವೇನು! ಹಸಿವೇನು! ಛಳಿಯೇನು! ಎಲ್ಲಾ ತುಚ್ಛ. ಭಗವಂತನಿಗೆ ಜಯವಾಗಲಿ! ಮುಂದೆ ಸರಿ. ದೇವರೇ ನಮ್ಮ ನಾಯಕ. ಕೆಳಗೆ ಬೀಳುವರಾರೆಂದು ಹಿಂದೆ ನೋಡಬೇಡಿರಿ. ಮುಂದೆ! ಮುಂದೆ! ಮುಂದಿರಲಿ ನಿಮ್ಮ ಕಣ್ಣು. ಎನ್ನ ಸಹೋದರರೆ! ನಾವು ಮುಂದರಿಯುವುದೀಪರಿ. ಒಬ್ಬ ಸೋತು ಬೀಳುತ್ತಾನೆ. ಮತ್ತೊಬ್ಬನು ಅವನ ಸ್ಥಳದಲ್ಲಿ ಏಳುತ್ತಾನೆ.

ಈ ಗ್ರಾಮದಿಂದ ಬೋಸ್ಟನ್ನಿಗೆ ನಾಳೆ ಹೋಗುತ್ತೇನೆ. ಅಲ್ಲಿ ದೊಡ್ಡದಾದೊಂದು ಸ್ತ್ರೀ ಸಂಘವಿದೆ. ಅಲ್ಲಿ ಭಾಷಣಮಾಡುತ್ತೇನೆ. ಆ ಸಂಘವು ಪಂಡಿತ ರಮಾಬಾಯಿಗೆ ಸಹಾಯಮಾಡುತ್ತಿದೆ. ನಾನು ಬೋಸ್ಟನ್ನಿಗೆ ಹೋಗಿ ಮೊದಲು ಬಟ್ಟೆಬರೆ ಕೊಂಡುಕೊಳ್ಳಬೇಕು. ನಾನಿಲ್ಲಿ ಕೊಂಚ ದಿನಗಳಿರಬೇಕೆಂದರೆ ಈ ನನ್ನ ಅಪೂರ್ವವಾದ ಪೋಷಾಕು ಸರಿಹೋಗದು. ನನ್ನನ್ನು ನೋಡಲು ನೂರಾರುಮಂದಿ ರಸ್ತೆಯಲ್ಲಿ ಗುಂಪುಕೂಡುತ್ತಾರೆ. ಈಗೊಂದು ಕರೀ ನಿಲುವಂಗಿಯನ್ನು ತೊಟ್ಟು ಉಪನ್ಯಾಸಮಾಡುವ ಸಮಯದಲ್ಲಿ ಕಾಷಾಯವನ್ನೂ ತಲೆಪಾಗನ್ನೂ ಧರಿಸುತ್ತೇನೆ. ಮಾಡುವುದೇನು? ಇಲ್ಲಿಯ ಸ್ತ್ರೀಯರು ನನಗೀಪ್ರಕಾರ ಆಲೋಚನೆ ಹೇಳುತ್ತಾರೆ. ಇಲ್ಲಿ ಕೆಲಸಮಾಡುವವರೆಲ್ಲರೂ ಸ್ತ್ರೀಯರೇ.

ಅವರ ಸಹಾನುಭೂತಿಯಿಲ್ಲದೆ ಕದಲಲಿಕ್ಕಿಲ್ಲ. ಈ ಪತ್ರವು ನಿನ್ನ ಕೈ ಸೇರುವುದಕ್ಕೆ ಮುಂಚೆ ಈಗ ನನ್ನಲ್ಲಿರುವ ರೊಕ್ಕ ೬೦-೭೦ ಪೌಂಡುಗಳು. ಆದುದರಿಂದ ಸ್ವಲ್ಪ ಹಣವನ್ನು ಗಳಿಸುವ ವಿಶೇಷ ಪ್ರಯತ್ನವನ್ನು ಮಾಡಬೇಕಾಗಿರುವುದು. ಇಲ್ಲಿ ನಾನೇನಾದರೂ ಕೊಂಚ ಕಾರ್ಯವನ್ನು ಮಾಡಬೇಕೆಂದರೆ ನಾನಿಲ್ಲಿ ಕೊಂಚಕಾಲ ನಿಲ್ಲಬೇಕಾದುದು ಅವಶ್ಯಕ. ಆದರೆ ಅದನ್ನು ನಾನು ಒಪ್ಪುವದಿಲ್ಲ. ಏಕೆಂದರೆ ಷಿಕಾಗೋವಿನಲ್ಲಿ ನಾನು ಒಂದು ತಿಂಗಳು ಹೆಚ್ಚಾಗಿ ನಿಂತುದೇ ಆದರೆ ನನ್ನಲ್ಲಿರುವ ಅಲ್ಪ ಸ್ವಲ್ಪ ರೊಕ್ಕವೆಲ್ಲಾ ಖರ್ಚಾಗಿಬಿಡುತ್ತದೆ.

ಅಮೆರಿಕದಲ್ಲಿ ಕಾನಡವನ್ನುಳಿದು ಇತರ ಭಾಗಗಳ ರೈಲುಗಾಡಿಯಲ್ಲಿ ಬೇರೆಬೇರೆ ಕ್ಲಾಸುಗಳಿಲ್ಲವಾದುದರಿಂದ ನಾನು ಯಾವಾಗಲೂ ಮೊದಲನೆಯ ಕ್ಲಾಸಿನಲ್ಲಿಯೇ ಪ್ರಯಾಣ ಮಾಡಬೇಕಾಗಿದೆ. ಆದರೆ ಪುಲ್‌ಮನ್ ಗಾಡಿಗಳಲ್ಲಿ ಪ್ರಯಾಣಮಾಡುವ ಗೋಜಿಗೆ ಹೋಗುವುದಿಲ್ಲ. ಆ ಗಾಡಿಯೇನೋ ಬಹಳ ಅನುಕೂಲ. ಹೋಟೇಲಿನಲ್ಲಿದ್ದಂತೆ ಸ್ನಾನ ಭೋಜನ ಪಾನ ನಿದ್ದೆ ಎಲ್ಲಕ್ಕೂ ಬಹಳ ಅನುಕೂಲ. ಆದರೆ ಖರ್ಚು ಬಹಳ ಹೆಚ್ಚು.

ಇಲ್ಲಿಯ ಜನಗಳಲ್ಲಿ ಕಲೆತು ಅವರಿಗೆ ಶಿಕ್ಷೆಕೊಡುವುದು ಪ್ರಯಾಸದ ಕಾರ್ಯ. ಈಗ ಎಲ್ಲರೂ ಪಟ್ಟಣಗಳನ್ನು ಬಿಟ್ಟು ಬೇಸಗೆ ಕಳೆಯುವ ಸ್ಥಳಗಳಿಗೆ ಹೋಗಿದ್ದಾರೆ. ಇನ್ನವರು ಹಿಂದಿರುಗಿ ಬರುವುದು ಚಳಿಗಾಲಕ್ಕೆ. ಆದುದರಿಂದ ನಾನಿಲ್ಲಿ ಕಾಯಬೇಕು ಕೊಂಚಕಾಲ. ಇಷ್ಟು ಹೋರಾಡಿದನಂತರ ಸುಮ್ಮನೆ ಬಿಡುತ್ತೇನೆಯೇ ನಾನು? ನಿನ್ನ ಕೈಲಾದ ಸಹಾಯ ಮಾತ್ರ ಮಾಡು. ಇನ್ನು ನಿನ್ನ ಕೈಲಾಗದಿದ್ದರೆ ನಾನು ಕೊನೆಯವರಿಗೆ ಪ್ರಯತ್ನಮಾಡಿ ನೋಡುತ್ತೇನೆ. ನಾನಿಲ್ಲಿ ಚಳಿಯಿಂದಾಗಲೀ, ರೋಗದಿಂದಾಗಲೀ, ಉಪವಾಸದಿಂದಾಗಲೀ ಸತ್ತರೆ ನೀವು ಈ ಕೆಲಸವನ್ನು ಹಿಡಿಯಿರಿ. ಪವಿತ್ರತೆ, ಸರಳತೆ, ವಿಶ್ವಾಸ ಇವೀಗ ಬೇಕಾದುವು. ನಾನಿಲ್ಲಿಯೇ ನಿಲ್ಲುವುದಾದರೆ ನನ್ನ ಕಾಗದಪತ್ರ, ರೊಕ್ಕವೇನಿರುವುವೊ ಅವನ್ನು ಕುಕ್ ಕಂಪೆನಿ ಪತ್ರಕಳುಹಿಸಿ ಅದನ್ನು ನಿನಗೆ ತಲಪಿಸುವ ಬಂದೋಬಸ್ತು

ಮಾಡುತ್ತೇನೆ. ರೋಮುಪಟ್ಟಣವು ಒಂದು ದಿನದಲ್ಲಿ ಕಟ್ಟಿ ಮುಗಿಯಲಿಲ್ಲ. ನಾನಿಲ್ಲಿರುತಿಂಗಳಿರುವುದಕ್ಕೆ ನೀವು ಹಣವನ್ನು ಕಳುಹಿಸುವುದಕ್ಕಾದರೆ ಆಶೆಯನ್ನಿಟ್ಟುಕೊಳ್ಳುತ್ತೇನೆ. ಎಲ್ಲವೂ ಸರಿಹೋಗುವುದು. ಈ ಮಧ್ಯೆ ನನಗೆ ಯಾವದಾದರೂ ಆಶ್ರಯ ಸಿಕ್ಕಿದರೆ ಅದನ್ನು ಅವಲಂಬಿಸಿ ಕೆಲಸ ವನ್ನು ಮಾಡುವುದಕ್ಕಾದರೆ ಆ ಕ್ಷಣವೇ ತಂತಿಯನ್ನು ಕಳುಹಿಸು ತ್ತೇನೆ. ತದನಂತರ ಇಂಗ್ಲೆಂಡಿನಲ್ಲಿ ಪ್ರಯತ್ನಪಡುತ್ತೇನೆ. ಅಲ್ಲಿಯೂ ನನ್ನ ಕಾರ್ಯವು ಕೈಗೂಡದೇ ಇದ್ದಲ್ಲಿ ಭಾರತವರ್ಷಕ್ಕೆ ಹಿಂದಿರುಗಿ ಮರಳಿ ಭಗವಂತನ ಆದೇಶವನ್ನು ನಿರೀಕ್ಷಿಸುವೆನು.

ಇಲ್ಲಿ ಹಗಲೂ ಇರಳೂ ಬೆಂಕಿ ಉರಿಯುತ್ತಲೇ ಇರಬೇಕು; ಅಷ್ಟು ಚಳಿ. ಕಾನಡದಲ್ಲಿ ಚಳಿ ಇನ್ನೂ ಹೆಚ್ಚು. ಅಲ್ಲಿಯಷ್ಟು ಸಣ್ಣ ಗುಡ್ಡಗಳ ಮೇಲೆ ಹಿಮ ಬಿದ್ದುದನ್ನು ನಾನೆಂದೂ ನೋಡಿರುದಿಲ್ಲ

ನಾನು ಈ ಸೋಮವಾರ ದೊಡ್ಡದೊಂದು ಸ್ತ್ರೀಸಭೆಯಲ್ಲಿ ಉಪ ನ್ಯಾಸಮಾಡುತ್ತೇನೆ. ಅಲ್ಲಿ ಇನ್ನೂ ಅನೇಕ ಸಭಾಸಮಿತಿಗಳ ಪರಿ ಚಯವುಂಟಾಗುವುದು. ಈಪ್ರಕಾರ ಕ್ರಮವಾಗಿ ನಾನು ದಾರಿಮಾಡಿ ಕೊಳ್ಳಬಲ್ಲೆನು. ಆದರೆ ಅದರ ಅರ್ಥವೇನಂದರೆ ಭಯವನ್ನುಂಟುಮಾ ಡುವ ಮಹಾರ್ಘ ಪ್ರದೇಶದಲ್ಲಿ ದೀರ್ಘಕಾಲವಾಸ.

ಭಾರತವರ್ಷದಲ್ಲಿ ರೂಪಾಯಿನ ಬೆಲೆ ಕೆಚ್ಚಿರುವುದು ಈ ದೇಶದ ಜನಗಳಲ್ಲಿ ಮಹಾಭಯವನ್ನುಂಟುಮಾಡಿದೆ. ಅನೇಕ ಮಿಲ್ಲುಗಳು (ಬಟ್ಟೆ ಕಾರ್ಖಾನೆಗಳು).ಬಂದಾಗಿವೆ. ಆದುದರಿಂದ ಸಹಾಯವನ್ನು ಗಳಿಸುವ ಪ್ರಯತ್ನವು ವ್ಯರ್ಥವೀಗ.

ನಾನು ಇಲ್ಲಿ ಇನ್ನೂ ಕೊಂಚಕಾಲ ಕಾಯಬೇಕು.

ಈಗತಾನೆ ದರ್ಜಿಹತ್ತಿರ ಹೋಗಿದ್ದು ಕೆಲವು ಚಳಿಕಾಲದ ಬಟ್ಟೆಬರೆ ಗಳನ್ನು ಹೊಲಿಯುವಹಾಗೆಹೇಳಿಬಂದೆನು. ಇದಕ್ಕೆ ಮುನ್ನೂರು ಅಲ್ಲವೆ ಅದಕ್ಕೆ ಹೆಚ್ಚಾಗಿ ಖರ್ಚು ಬೀಳಬಹುದು. ಇದು ಬಹಳ ಉತ್ಕೃಷ್ಟ ವಾದ ಬಟ್ಟೆ ಎಂಬುದನ್ನು ನಾನು ಮನಸ್ಸಿಗೆ ತರುವುದಿಲ್ಲ. ಈಪ್ರಕಾರ

ನಡೆಯುವುದೇ ಪದ್ಧತಿ. ಇಲ್ಲಿಯ ಸ್ತ್ರೀಯರಿಗೆ ಪುರುಷರ ಪೋಷಾಕಿನ ವಿಷಯದಲ್ಲಿ ಬಹಳ ಅಸಮಾಧಾನ. ಇಲ್ಲಿ ಅವರದೇ ಪ್ರಭುತ್ವ. ಇವರು ರಮಾಬಾಯಿಗೆ ಅಧಿಕ ಸಹಾಯಮಾಡುತ್ತಿದ್ದಾರೆ. ನಾನು ಇಲ್ಲಿ ಇರಬೇಕೆಂಬ ಉದ್ದೇಶದಿಂದ ಹಣ ಕಳುಹಿಸುವುದಕ್ಕೆ ನಿಮ್ಮ ಕೈಲಾಗದ ಪಕ್ಷದಲ್ಲಿ ಈ ದೇಶವನ್ನು ಬಿಟ್ಟು ಹೊರಡುವುದಕ್ಕೆ ಖರ್ಚನ್ನು ಕಳುಹಿಸಿ. ಈ ನಡುವೆ ಏನಾದರೂ ಶುಭಸಮಾಚಾರವಿದ್ದರೆ ನಾನು ಪತ್ರ ಬರೆಯುತ್ತೇನೆ. ಅಲ್ಲವೆ ತಂತಿ ಕೊಡುತ್ತೇನೆ. ಬರೀ ತಂತಿ ಕೊಡೋಣವೆಂದರೆ ಒಂದೊಂದು ಮಾತಿಗೆ ನಾಲ್ಕು ರೂಪಾಯಿ ಖರ್ಚು.

ನಿನ್ನ
ವಿವೇಕಾನಂದ.

(ಚಿಕಾಗೋ ಧರ್ಮಮಹಾಸಭೆಯೀ ಮದ್ರಾಸಿನಲ್ಲಿ ಶಿಷ್ಯರೊಬ್ಬರಿಗೆ ಬರೆದ ಪತ್ರ)

ಚಿಕಾಗೋ,
೨ನೆ ನವಂಬರು ೧೮೯೩.

ನಿನ್ನೆ ತಲಪಿತು ನಿನ್ನ ಕಾಗದ. ನನ್ನ ಕ್ಷಣಮಾತ್ರದ ಅಪನಂಬಿಕೆ ಮನೋದೌರ್ಬಲ್ಯಗಳಿಂದ ನಿಮ್ಮೆಲ್ಲರಿಗೂ ಅಷ್ಟು ಕಷ್ಟವನ್ನು ಕೊಟ್ಟುದಕ್ಕಾಗಿ ನನಿಗೆ ಬಹಳ ದುಃಖ. ಜಬಿಲ್ ದಾಸನು ಎಂದು ನನ್ನನ್ನು ಬಿಟ್ಟು ಹೋದನೋ ಅಂದು ನಾನು ಅಸಹಾಯನಾದುದನ್ನೂ ಕೈಯಲ್ಲಿ ಕಾಸಿಲ್ಲದಿರುವುದನ್ನೂ ಅರಿತು ನಿರಾಶನಾಗಿ ನಿಮಗೆ ತಂತಿಕೊಟ್ಟೆನು. ಈಚೆಗೆ ಭಗವಂತನು ನನಗೆ ಅನೇಕ ಸ್ನೇಹಿತರನ್ನೂ ಸಹಾಯವನ್ನೂ ದಯಪಾಲಿಸಿರುತ್ತಾನೆ. ಬೋಸ್ಟನ್ನಿಗೆ ಸಮೀಪದಲ್ಲಿರುವ ಒಂದು ಗ್ರಾಮದಲ್ಲಿ ಡಾಕ್ಟರ್ ರೈಟ್ ಎಂಬ ಮಹನೀಯರೊಬ್ಬರ ಪರಿಚಯವಾಯಿತು. ಅವರು ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಗ್ರೀಕ್ ಭಾಷೆಯ ಅಧ್ಯಾಪಕರು. ಅವರು ನನ್ನಲ್ಲಿ ಅತಿಶಯ ಆದರವನ್ನೂ ಸಹಾನುಭೂತಿಯನ್ನೂ ತೋರಿಸಿ ನಾನು ಧರ್ಮಮಹಾಸಭೆಗೆ ಹೋಗುವುದರ ಆವಶ್ಯ

ಕತೆಯನ್ನು ತಿಳಿಸಿದರು. ಅಲ್ಲಿ ನನಗೆ ಅಮೆರಿಕಜಾತಿಯುಪರ ಪರಿಚಯವಾಗುವುದೆಂಬುದು ಅವರ ಭಾವನೆ. ನನಗಲ್ಲಿ ಯಾರಪರಿಚಯವೂ ಇಲ್ಲವಾದುದರಿಂದ ನನಗೆ ಬೇಕಾದ ಸಹಾಯವನ್ನು ಒದಗಿಸಿ ಕೊಡುವ ಭಾರವನ್ನು ಅಧ್ಯಾಪಕರೇ ವಹಿಸಿದರು. ನಾನು ಇಲ್ಲಿಗೆ ಬಂದುದು ಈಪರಿ. ಇಲ್ಲಿ ಒಬ್ಬ ಗೃಹಸ್ಥನ ಮನೆಯುಲ್ಲಿ ಧರ್ಮಮಹಾಸಭೆಯ ಪ್ರಾಚ್ಯ ಪಾಶ್ಚಾತ್ಯ ಪ್ರತಿನಿಧಿಗಳೂ ನಾನೂ ಉಳಿದುಕೊಂಡೆವು.

ಮಹಾಸಭೆಯು ಪ್ರಾರಂಭವಾದ ಬೆಳಿಗ್ಯೆ 'ಶಿಲ್ಪಪ್ರಾಸಾದ' ವೆಂಬ ಕಟ್ಟಡದಲ್ಲಿ ನಾವೆಲ್ಲರೂ ಕೂಡಿದೆವು. ಅಲ್ಲಿ ಮಹಾಸಭೆಯ ಅಧಿವೇಶನಗಳಿಗಾಗಿ ದೊಡ್ಡದೊಂದು ಸಣ್ಣವು ಕೆಲವು ಹಾಲುಗಳು ನಿರ್ಮಿತವಾಗಿದ್ದುವು. ಇಲ್ಲಿ ಸಕಲ ಜನಾಂಗದವರೂ ನೆರೆದಿದ್ದರು. ಭಾರತವರ್ಷದಿಂದ ಬಂದಿದ್ದವರು ಯಾರೆಂದರೆ ಬ್ರಹ್ಮಸಮಾಜದ ಪ್ರತಾಪ ಚಂದ್ರ ಮುಜುಂದಾರ್, ಮುಂಬಯಿಂದ ನಗರ್‌ಕರ್ ಅವರು, ಜೈನರ ಪ್ರತಿನಿಧಿಗಳಾದ ವೀರಚಂದ್ ಗಾಂಧಿಯುವರು, ಶ್ರೀಮತಿ ಅನಿಬೀಸಂಟರವರ ಜತೆಗೆ ಥಿಯಾಸಫಿಕಲ್ ಪ್ರತಿನಿಧಿಗಳಾದ ಚಕ್ರವರ್ತಿಯುವರು. ಇವರಲ್ಲಿ ಮುಜುಂದಾರರು ನನ್ನ ಪೂರ್ವ ಸ್ನೇಹಿತರು. ಮ॥ ರಾ॥ ಚಕ್ರವರ್ತಿಯವರಿಗೆ ನನ್ನ ಹೆಸರು ಮಾತ್ರ ಗೊತ್ತಿತ್ತು. ನಮ್ಮ ವಾಸಸ್ಥಾನದಿಂದ ಶಿಲ್ಪ ಪ್ರಾಸಾದದವರೆಗೆ ನಮ್ಮನ್ನು ಮೆರವಣಿಗೆ ಮಾಡಿಕೊಂಡು ಹೋಗಿ ಅಲ್ಲಿ ಪ್ಲಾಟ್‌ಫಾರಂಮಿನ ಮೇಲೆ ಸಾಲಾಗಿ ಕುಳ್ಳಿರಿಸಿದರು. ಕಲ್ಪನೆಯನ್ನು ನೀವೇ ಮಾಡಿಕೊಳ್ಳಿರಿ–ಸುಶಿಕ್ಷಿತರಾದ ಆರು ಏಳುಸಾವಿರ ಅಮೆರಿಕನರಿಂದ ನಿಬಿಡವಾದ ಕೆಳಗೊಂದು ದೊಡ್ಡ ಹಾಲು, ಮೇಲೊಂದು ದೊಡ್ಡ ಗಾಲರಿ. ಪ್ಲಾಟ್‌ಫಾರಮಿನ ಮೇಲೆ ಈ ಲೋಕದ ಸಕಲ ಜಾತಿಯ ಪಂಡಿತರ ಗುಂಪು. ಹುಟ್ಟಿದಾರಭ್ಯ ಬಹಿರಂಗದಲ್ಲಿ ಜನಗಳ ಮುಂದೆ ಎಂದೂ ಬಾಯಿ ತೆರೆಯದೆ ಇದ್ದ ನಾನು ಈ ಮಹಾಸಭೆಯ ಮುಂದೆ ಮಾತನಾಡುವುದಂತೆ! ಸಂಗೀತ ಭಾಷಣಾದಿಗಳಿಂದ ಕೂಡಿ ಅತಿ ವಿಜೃಂಭಣೆಯಿಂದ ಆರಂಭವಾಯಿತು ಸಭೆ. ತರುವಾಯ ಪ್ರತಿನಿಧಿಗಳಿಗೆ ಒಬ್ಬೊಬ್ಬರಾಗಿ ಸಭಿಕರ ಪರಿಚಯವನ್ನು ಮಾಡಿಕೊಡಲು,

ಅವರೆದ್ದು ಮುಂದೆ ಬಂದು ಮಾತನಾಡಿದರು. ನನ್ನ ಎದೆಯೊಡಕೊಡವಡವಗುಟ್ಟುತ್ತಿದ್ದುದೆಂದು ನಾನು ಹೇಳಬೇಕಾದುದಿಲ್ಲ. ನನ್ನ ನಾಲಿಗೆ ಒಣಗಿಯೇ ಹೋಗಿತ್ತು. ಬೆಳಿಗ್ಗೆ ಮಾತನಾಡಲು ಯತ್ನಮಾಡಲಿಕ್ಕಾದಷ್ಟು ನಡುಕ ಹತ್ತಿತು ನನಗೆ. ಮುಜುಂದಾರರ ಭಾಷಣವು ಸುಂದರವಾಗಿದ್ದಿತು. ಚಕ್ರವರ್ತಿಯವರದು ಸುಂದರತರವಾಗಿದ್ದಿತು. ಜನರು ಅವರ ವಾಕ್ಯಗಳನ್ನು ಕೊಂಡಾಡಿದರು. ಬಹಳವಾಗಿ. ಅವರೆಲ್ಲರೂ ತಮ್ಮ ಭಾಷಣಗಳನ್ನು ಮುಂದಾಗಿಯೇ ಬರೆದಿಟ್ಟುಕೊಂಡು ಸಿದ್ಧರಾಗಿ ಬಂದಿದ್ದರು. ನಾನೇ ಹುಚ್ಚ. ನನ್ನಲ್ಲಿ ಬರೆದ ಭಾಷಣವಾವುದೂ ಇರಲಿಲ್ಲ. ಆದರೇನು. ನಾನು ಮನಸ್ಸಿನಲ್ಲಿ ದೇವೀ ಸರಸ್ವತಿಗೆ ನಮಸ್ಕರಿಸಿ ಎದ್ದು ಮುಂದೆ ನಿಂತೆನು. ಡಾಕ್ಟರ್ ಬ್ಯಾರೋಸ್ ಮಹಾಶಯರು ನನಗೆ ಸಭಾಪರಿಚಯವನ್ನು ಮಾಡಿಸಿದನಂತರ ನಾನು ಒಂದೆರಡು ಮಾತುಗಳನ್ನು ಹೇಳಿ ಸಣ್ಣದೊಂದು ಭಾಷಣಮಾಡಿದೆನು. ಎಂದು ನಾನು ಸದಸ್ಯರನ್ನು 'ಅಮೆರಿಕ ನಿವಾಸಿಗಳಾದ ಎನ್ನ ಸಹೋದರ ಸಹೋದರಿಯರೆ' ಎಂಬುದಾಗಿ ಸಂಬೋಧಿಸಿ ಮಾತನಾಡಲು ಪ್ರಾರಂಭಿಸಿದೆನೋ ಅಂದು ಎರಡು ನಿಮಿಷಗಳ ಪರ್ಯಂತ ಕೈಚಪ್ಪಾಳೆಯ ಧ್ವನಿಯು ಸಭಾಮಂದಿರವನ್ನು ತುಂಬಿತು. ತರುವಾಯ ನಾನು ಮಾತನಾಡಲಾರಂಭಿಸಿದೆನು. ನನ್ನ ಭಾಷಣ ಮುಗಿದನಂತರ ಹೃದಯದ ಆವೇಗದಿಂದ ಅವಶನಾಗಿ ಕುಳಿತುಕೊಂಡೆನು. ಮರುದಿನ ವರ್ತಮಾನಪತ್ರಿಕೆಗಳೆಲ್ಲವೂ ನನ್ನ ಭಾಷಣವೇ ಭಾಷಣ, ನನ್ನೇಟೇ ಏಟು ಎಂದು ಕೊಂಡಾಡಿದವು. ಒಡನೆಯೇ ಅಮೆರಿಕದೇಶವೆಲ್ಲಕ್ಕೂ ತಿಳಿದವನಾದೆನು ನಾನು. ಶ್ರೇಷ್ಠ ಟೀಕಾಕಾರರಾದ ಶ್ರೀಧರರ ನುಡಿ ಸತ್ಯವೇಸರಿ 'ಮೂಕಂ ಕರೋತಿ ವಾಚಾಲಂ.' ಮೂಕನನ್ನು ವಾಚಾಲನನ್ನಾಗಿ ಮಾಡಲು ಸಮರ್ಥನು ಭಗವಂತನು. 'ಹೇ ದೇವ ನಿನ್ನ ನಾಮಕ್ಕೆ ಜಯವಾಗಲಿ. ಅಂದಿನಿಂದ ನಾನೊಬ್ಬ ವಿಖ್ಯಾತಪುರುಷನಾದೆನು. ನಾನು ಯಾವ ದಿವಸ ಹಿಂದೂ ಧರ್ಮ ಸಂಬಂಧವಾದ ಉಪನ್ಯಾಸವನ್ನು ಓದಿದೆನೋ ಆದಿನ ಎಂದೂ ಇಲ್ಲದಂತೆ ಸಭಾಮಂಟಪವು ಜನಗಳಿಂದ ತುಂಬಿ ತುಳುಕಾಡುತ್ತಿತ್ತು. ಒಂದು ವರ್ತಮಾನ ಪತ್ರಿಕೆಯಿಂದ ಮುಂದೆ ಬರೆದಿರುವುದನ್ನು ಉದ್ಧರಿಸಿ

ದ್ದೇನೆ. "ನೋಡಿದೆಡೆಯಲ್ಲೆಲ್ಲಾ ಸ್ತ್ರೀಯರ ಗುಂಪೇ. ಹಿಂದು ಮುಂದೆ ಎಲ್ಲಿ ನೋಡಿದರೂ ಸ್ತ್ರೀಯರೇ. ಇತರರ ಭಾಷಣಗಳು ಮುಗಿದು ಶ್ರೀ ವಿವೇಕನಂದರವರು ಮಾತನಾಡುವ ಪರ್‍ಯಂತ ತಾಳ್ಮೆಯಿಂದ ಕುಳಿತು ಕೊಂಡಿದ್ದರು.' ಸಂವಾದ ಪತ್ರಿಕೆಗಳಲ್ಲಿ ನನ್ನ ವಿಷಯವಾಗಿ ಬರೆದಿರು ವುದನ್ನು ಕತ್ತರಿಸಿ ಕಳುಹಿಸುವೆನಾದರೆ ನೀನು ಆಶ್ಚರಿಗೊಳ್ಳುವಿ. ಆದರೆ ಈ ಹೆಸರುವಾಸಿ, ಯಶಸ್ಸು ನನಗೆ ಬೇಕಿಲ್ಲ. ಇದು ನನಗೆ ಮೊದಲೇ ಗೊತ್ತು. ಆದರೆ ಇಷ್ಟು ಹೇಳಿದರೆ ಸಾಕು. ನಾನು ಪ್ಲಾಟ್ ಫಾರಂ ಮೇಲೆ ಹೋದೊಡನೆಯೇ ಕಿವಿ ಕಿವುಡಾಗುವಂತೆ ಕೈಚಪ್ಪಾಳೆ ಶಬ್ದವು ಎದ್ದಿತು. ಪ್ರಾಯಶಃ ಎಲ್ಲಾ ಪತ್ರಿಕೆಗಳೂ ನನ್ನನ್ನು ಬಹಳ ವಾಗಿ ಪ್ರಶಂಸೆಮಾಡಿದವು. ಕೇವಲ ಸ್ವಾಭಿಮಾನ ಪತ್ರಿಕೆಗಳು ಕೂಡ "ಸುಂದರ ಮುಖವುಳ್ಳವನಾಗಿ ವೈದ್ಯುತಿಕ ಶಕ್ತಿಶಾಲಿಯಾಗಿ ಅದ್ಭುತ ವಾಙ್ಮಯಾದೀ ವ್ಯಕ್ತಿಯು' ಈ ಮಹಾಸಭೆಯಲ್ಲಿ ಅಗ್ರಗಣ್ಯನು." ಇತ್ಯಾದಿ. ಇದಕ್ಕೆ ಮುಂಚೆ ಪ್ರಾಚ್ಯ ದೇಶದವನಾವನೂ ಅಮೇರಿಕದ ಮೇಲೆ ಇಂತಹ ಪ್ರಭಾವವನ್ನು ವಿಸ್ತರಿಸುವುದಕ್ಕೆ ಶಕ್ಯನಾಗಿರಲಿಲ್ಲ. ನೀನು ಇಷ್ಟು ತಿಳಿದುಕೊಂಡರೆ ಸಾಕು. ಅಮೇರಿಕನರ ದಯೆಯನ್ನು ಏನೆಂದು ಹೇಳುವ. ಈಗ ನಾನು ಯಾವ ಕೊರತೆಗಳೂ ಇಲ್ಲದೆ ಸೌಖ್ಯ ವಾಗಿದ್ದೇನೆ. ಯೂರೋಪು ಯಾತ್ರೆಗೆ ಬೇಕಾದ ಖರ್ಚನ್ನು ನಾನು ಇಲ್ಲಿಯೇ ಎಬ್ಬಿಸುತ್ತೇನೆ. ಆದುದರಿಂದ ನೀನು ಇನ್ನು ನನಗಾಗಿ ಹಣ ವನ್ನು ಕಳುಹಿಸಬೇಕಾದ ಆವಶ್ಯಕತೆಯಿಲ್ಲ. ನೀನು ಹಣಕಳಿಸುವುದಕ್ಕೆ ಮುಂಚೆ ನಾನು ಕುಕ್ ಕಂಪನಿಯಿಂದ ಮುವತ್ತು ಪೌಂಡುಗಳನ್ನು ಪಡೆದೆನು. ನರಸಿಂಹಾಚಾರ್ಯನೆಂಬ ನಾಮಧೇಯವುಳ್ಳ ಯುವಕನೊ ರ್ವನು ನನ್ನ ಹತ್ತಿರ ಬಂದಿದ್ದಾನೆ. ಅವನು ಕಳೆದ ಮೂರು ವರ್ಷಗ ಳಿಂದಲೂ ಷಿಕಾಗೋವಿನಲ್ಲಿ ಅಲೆಯುತ್ತಿದ್ದಾನೆ. ಅವನು ಪೋಲಿಯೋ ಅಲ್ಲವೋ ಹೇಗಾದರೂ ಇರಲಿ. ಅವನನ್ನು ಕಂಡರೆ ನನಗೆ ಇಷ್ಟ. ಆದು ದರಿಂದ ಅವನ ವಿಷಯವಾಗಿ ನಿನಗೆ ತಿಳಿದುದನ್ನೆಲ್ಲಾ ಬರೆ. ನಿನ್ನನ್ನು ಅವನು ಬಲ್ಲ. ಪ್ಯಾರಿಸ್ ಎಗ್ಜಿಬಿಷನ್ ನಡೆದ ಸಂವತ್ಸರ ಆತನು ಯೂರೋ ಪಿಗೆ ಬಂದನಂತೆ. ನನ್ನ ಒಟ್ಟಿ ಬರೆಗಾಗಿ ಹೆಚ್ಚು ಖರ್ಚಾಯಿತು. ಅವನ್ನು

ಕಳೆದು ನನ್ನಲ್ಲಿ ಉಳಿದಿರುವುದು ೨೦೦ ಪೌಂಡುಗಳು. ನನಗೆ ಯಾವ ಕೊರತೆಯೂ ಇಲ್ಲ ಈಗ. ಈ ಷಹರಿನಲ್ಲಿರುವ ಅನೇಕ ಅತಿಸುಂದರವಾದ ಮನೆಗಳಲ್ಲಿ ನನಗೆ ಅತಿಥಿಸತ್ಕಾರವುಂಟು. ಇಷ್ಟು ದಿವಸವೂ ಒಬ್ಬರಿಲ್ಲದಿದ್ದರೆ ಮತ್ತೊಬ್ಬರ ಅತಿಥಿಯಾಗಿ ಕಾಲ ಕಳೆಯುತ್ತಿದ್ದೇನೆ. ಇತರ ಯಾವ ಜನಾಂಗದಲ್ಲಿಯೂ ಇಲ್ಲದೊಂದು ಕುತೂಹಲ ಅಮೇರಿಕನರಲ್ಲಿ. ಎಲ್ಲವನ್ನೂ ಅರಿಯಬೇಕೆಂಬುದು ಅವರ ಅಭಿಲಾಷೆ. ಅವರ ಸ್ತ್ರೀಯರನ್ನು ಏನೆಂದು ಹೇಳುವ! ಪ್ರಪಂಚದ ಎಲ್ಲಾ ಜಾತಿಯ ಸ್ತ್ರೀಯರಿಗಿಂತಲೂ ಇವರು ಮೇಲು. ಅಮೆರಿಕದ ಸಾಮಾನ್ಯ ಪುರುಷನಿಗಿಂತಲೂ ಅಮೆರಿಕದ ಸಾಮಾನ್ಯ ಸ್ತ್ರೀಯು ಅಧಿಕವಾಗಿ ಸುಶಿಕ್ಷಿತಳು. ಗಂಡಸರು ದುಡ್ಡಿಗಾಗಿ ಯಾವಜ್ಜೀವವೂ ದುಡಿಯುತ್ತಾರೆ. ಹೆಂಗಸರಾದರೋ ತಮ್ಮ ಏಳಿಗೆಗಾಗಿ ಸಿಕ್ಕಿದ ಅವಕಾಶವನ್ನು ಬಿಡುವುದಿಲ್ಲ. ಅವರು ಒಳ್ಳೆಯ ಸುಹೃದಯರು, ಅಕಪಟಿಗಳು. ಯಾವ ಖಯಾಲಿಯಾಗಲಿ ಆತನ ತಲೆಯಲ್ಲಿ ಏಸುಹತ್ತಿರುವುದೋ ಅದನ್ನು ಪ್ರಚಾರಗೊಳಿಸುವುದಕ್ಕೆ ಇಲ್ಲಿ ಬರುತ್ತಾನೆ. ಆದರೆ ಅದರಲ್ಲಿ ಅಧಿಕಾಂಶ ಖೋಟವೆಂದು ಹೇಳಲು ನನಗೆ ಸಂಕೋಚ. ಅಮೆರಿಕದಲ್ಲಿ ದೋಷಗಳೂ ಉಂಟು. ದೋಷ ಯಾವ ಜಾತಿಯಲ್ಲಿತಾನೇ ಇಲ್ಲ. ಆದರೆ ಇದೀಗ ನನ್ನ ಸಂಕ್ಷೇಪಮತ. ಆಸಿಯಖಂಡವು ನಾಗರಿಕತೆಯ ಬೀಜವನ್ನು ಹಾಕಿತು. ಯೂರೋಪು ಪುರುಷನ ಉನ್ನತಿ ವಿಧಾನವನ್ನು ಕೈಕೊಂಡಿತು. ಅಮೆರಿಕವು ಸ್ತ್ರೀಯರ ಮತ್ತು ಸಾಮಾನ್ಯರ ಉನ್ನತಿಯನ್ನು ಎಸಗುತ್ತಿದೆ. ಸ್ತ್ರೀಯರ ಮತ್ತು ಕರ್ಮಕಾರರ ಸ್ವರ್ಗವೇ ಇದು. ಅಮೆರಿಕದ ಸ್ತ್ರೀಯರನ್ನೂ ಸಾಮಾನ್ಯ ಜನರನ್ನೂ ನಮ್ಮ ಇಂಡಿಯದ ಸ್ತ್ರೀಯರೊಡನೆಯೂ ಸಾಮಾನ್ಯ ಜನರೊಡನೆಯೂ ಹೋಲಿಸಿ ನೋಡಿದರೆ ನಿನಗೆ ಒಡನೆ ಗೊತ್ತಾಗುತ್ತದೆ. ಅಮೆರಿಕನರು ಬೇಗ ಬೇಗನೆ ಉದಾರಭಾವಾಪನ್ನರಾಗುತ್ತಿದ್ದಾರೆ. ಇಂಡಿಯದಲ್ಲಿ ನಮ್ಮ ಕಣ್ಣಿಗೆ ಬೀಳುವ 'ಓಡು ಮುಚ್ಚಿದ' (Hardshelled) ಕಿರಸ್ತಾನರಂತಲ್ಲ ಇಲ್ಲಿನವರು. ಅಂತಹವರೂ ಉಂಟು ಇಲ್ಲಿ. ಆದರೆ ಅವರ ಸಂಖ್ಯೆ ಶೀಘ್ರವಾಗಿ ಕಡಮೆಯಾಗುತ್ತಿದೆ. ಯಾವ ಆಧ್ಯಾತ್ಮಿಕತೆಯನ್ನಾದರೆ ಹಿಂದುವು ತನ್ನ

ಮುಖ್ಯವಾದ ಹೆಮ್ಮೆ ಎಂದು ತಿಳಿದುಕೊಂಡಿದ್ದಾನೆಯೋ ಅದರ ಕಡೆ ಯೇ ಈ ಜನಾಂಗವು ಬೇಗನೆ ನಡಿಯುತ್ತಿದೆ.

ಹಿಂದುವೂ ತನ್ನ ಧರ್ಮವನ್ನು ಎಂದೂ ಬಿಡಕೂಡದು. ಆದರೆ ಧರ್ಮವನ್ನು ಸರಿಯಾದ ಕಟ್ಟುನಿಟ್ಟಿನಲ್ಲಿಟ್ಟಿರಬೇಕು. ಸಮಾಜದ ಬೆಳೆವಣಿಗೆಗಾಗಿ ಸ್ವಾತಂತ್ರ್ಯವನ್ನು ಕೊಡಬೇಕು. ಭಾರತವರ್ಷದ ಸಕಲಸಂಸ್ಕಾರಕರೂ ಪುರೋಹಿತರ ಅತ್ಯಾಚಾರಕ್ಕೂ ಅವನತಿಗೂ ಧರ್ಮವೇ ಕಾರಣವೆಂದು ಬಗೆದು ದೊಡ್ಡ ತಪ್ಪುಮಾಡಿ ಆ ಅವಿನಶ್ವರ ದುರ್ಗವನ್ನು ಕೆಡಹುವುದಕ್ಕೆ ಮೊದಲು ಮಾಡಿದರು. ಆದರೆ ಅದರ ಫಲವೇನಾಯಿತು! ಕೆಲಸ ಕೆಟ್ಟುಹೋದುದೇ ಫಲ. ಬುದ್ಧದೇವನಿಂದ ಮೊದಲುಮಾಡಿ ರಾಜಾ ರಾಮಮೋಹನರಾಯರ ಪರ್ಯಂತ ಎಲ್ಲರೂ ಜಾತಿಭೇದವೆಂಬುದು ಧರ್ಮಸಂಬಂಧವಾದುದೊಂದು ಕಟ್ಟು ಎಂದು ಭ್ರಮೆಗೊಂಡು ಧರ್ಮ ಜಾತಿ ಇವೆರಡನ್ನೂ ಒಟ್ಟಿಗೆ ಹಾಳುಮಾಡಲು ಪ್ರಯತ್ನಿಸಿದರು. ಆದರೆ ಅವರ ಕೆಲಸ ಕೈಗೂಡಿತೇನು? ಇಲ್ಲ. ಪುರೋಹಿತಗಣವೇನು ಬೇಕಾದರೂ ಬೊಗಳಲಿ. ಜಾತಿಯೆಂಬುದು ಕಲ್ಲಾಗಿ ಪರಿಣಮಿಸಿರುವ ಸಮಾಜ ಸಂಬಂಧವಾದೊಂದು ಕಟ್ಟು. ಈ ಕಟ್ಟಿನ ಕೆಲಸಮುಗಿದು ಅದರ ದುರ್ಗಂಧದಿಂದ ಭಾರತವರ್ಷದ ಆಕಾಶವೆಲ್ಲಾ ತುಂಬಿ ಹೋಗಿದೆ. ಈ ಕಟ್ಟು ಮುರಿದು ಬೀಳಬೇಕಾದರೆ ಜನಗಳು ಕಳೆದುಕೊಂಡಿರುವ ಸಾಮಾಜಿಕ ವ್ಯಕ್ತಿತ್ವವನ್ನು ಅವರು ಮರಳಿಪಡೆಯಬೇಕು. ಇಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ತಾನೊಬ್ಬ ಮನುಷ್ಯನೆಂಬುದು ಗೊತ್ತು. ಭಾರತವರ್ಷದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ತಾನೊಬ್ಬ ಸಮಾಜದ ಗುಲಾಮನೆಂಬುದು ಗೊತ್ತು. ಮುಂದಿನ ಏಳಿಗೆಗೆ ಸ್ವಾಧೀನತೆ ಒಂದೇ ಸಹಾಯವು. ಅದು ಹೋದರೆ ಅವನತಿಯೇ ಫಲ. ಈಗಣ ಕಾಲದಲ್ಲಿ ತಲೆದೋರಿರುವ ಒಬ್ಬರಮೇಲೊಬ್ಬರ ಪೋಟಾಪೋಟಿಯಿಂದ ಜಾತಿಗೆ ಬಂದಿರುವ ಗತಿಯನ್ನು ನೋಡು. ಅದೆಷ್ಟು ಬೇಗನೆ ಅದೃಶ್ಯವಾಗುತ್ತಿದೆ? ಅದರ ನಾಶಕ್ಕೆ ಧರ್ಮಬೇಕಿಲ್ಲ. ಈಗ ಉತ್ತರ ಹಿಂದೂಸ್ಥಾನದಲ್ಲಿ ಬ್ರಾಹ್ಮಣ ಜೋಡು ಹೊಲಿಯುವವ ಬ್ರಾಹ್ಮಣ

ಸಾರಾಯಿ ಇಳಿಸುವವ ಇವರೆಲ್ಲರೂ ಸಾಮಾನ್ಯ. ಇದಕ್ಕೆ ಕಾರಣವೇನು ? ಪೋಟಾಪೋಟಿ. ಈಗಣ ಕಾಲದಲ್ಲಿ ಜೀವನೋಪಾಯಕ್ಕಾಗಿ ಅವನ ವನು ಅವನವನ ಕೆಲಸವನ್ನು ಮಾಡುವುದಕ್ಕೆ ಯಾರ ಅಡ್ಡಿ! ಇದರ ಫಲ ವೇನು! ತಲೆಹೋಗುವ ಪೋಟಾಪೋಟಿಯುಂಟಾಗಿ ಸಾವಿರಾರು ಮಂದಿ ನೋವಾರಿಗಳಾಗಿ ಅವನತಿ ಹೊಂದಿ ನರಳಿ ಸಾಯದೆ ಸರ್ವಪ್ರ ಯತ್ನದಿಂದ ತಮ್ಮತಮ್ಮ ಯೋಗ್ಯತೆಗೆತಕ್ಕ ಉನ್ನತ ದಶೆಗಳಿಗೆ ಬರುತ್ತಿ ದ್ದಾರೆ.

ಚಳಿ ಮುಗಿಯುವವರೆಗೆ ನಾನು ಈ ದೇಶದಲ್ಲಿದ್ದು ತರುವಾಯ ಯೂರೋಪಿಗೆ ಪ್ರಯಾಣವನ್ನು ಬೆಳೆಸಬೇಕು. ನನಗೆ ಬೇಕಾದ ಸಹಾಯವನ್ನು ದೇವರು ದಯಪಾಲಿಸುತ್ತಾನೆ ; ನಿನಗೆ ಬೇಡ ಆ ಆಲೋ ಚನೆ. ನಿನಗೆ ನನ್ನಲ್ಲಿರುವ ಪ್ರೀತಿಗಾಗಿ ನನ್ನ ಕೃತಜ್ಞತೆಯನ್ನು ಪ್ರಕಾಶ ಪಡಿಸಲು ನನ್ನಿಂದಾಗದು.

ದಿನದಿನವೂ ದೇವರು ನನ್ನ ಕೂಡ ಇದ್ದಾನೆಂಬುದನ್ನು ಅರಿಯುತ್ತಿ ದ್ದೇನೆ. ನಾನು ಆತನ ಆಜ್ಞಾಪಾಲನವನ್ನು ಮಾಡಲು ಪ್ರಯತ್ನಪಡು ತ್ತಿದ್ದೇನೆ. ಆತನ ಇಷ್ಟವಿದ್ದಂತಾಗಲಿ. ಲೋಕಹಿತಾರ್ಥವಾಗಿ ದೊಡ್ಡದೊಡ್ಡ ಕೆಲಸಗಳನ್ನು ಮಾಡುವೆವು ನಾವು. ನಿಸ್ಪೃಹರಾಗಿ ಒಳ್ಳೆ ಯದನ್ನು ಮಾಡಬೇಕೆಂಬುದೀಗ ಉದ್ದೇಶ. ಅಷ್ಟೇ. ಹೆಸರು ಕೀರ್ತಿ ಇವುಗಳಿಗಾಗಲ್ಲ.

'ಪ್ರಶ್ನೆಮಾಡುವುದು ನಮ್ಮ ಕೆಲಸವಲ್ಲ. ಕೆಲಸಮಾಡಿ ಸಾಯು ವುದೀಗ ನಮ್ಮ ಕೆಲಸ'. ಸಂತೋಷದಿಂದಿರು. ದೊಡ್ಡದೊಡ್ಡ ಕೆಲಸ ಗಳನ್ನು ಭಗವಂತನು ನಮ್ಮ ದ್ವಾರಾ ಮಾಡಿಸುತ್ತಾನೆಂದು ನಂಬು. ಅವನ್ನು ಮಾಡಲೇಮಾಡುವೆವು ನಾವು. ಅದಕ್ಕಾಗಿ ಸೊಂಟಕಟ್ಟಿ ಸಿದ್ಧನಾಗಿರು. ಸ್ವಾರ್ಥತೆ ಎಳ್ಳಷ್ಟೂ ಇಲ್ಲದೆ ಪ್ರೇಮಸಂಪನ್ನನಾಗು. ಬಡವರಲ್ಲಿಯೂ, ದೀನರಲ್ಲಿಯೂ, ನೆಲಕ್ಕೆ ಹಾಕಿ ಮೆಟ್ಟಿದವರಲ್ಲಿಯೂ ಪ್ರೇಮವನ್ನು ತೋರು. ದೇವರು ಹರಸುವನು ನಿನ್ನನ್ನು. ರಾಮ

ನಾಡಿನ ರಾಜರನ್ನೂ ಇತರರನ್ನೂ ನೋಡು ಆಗಿಂದಾಗ್ಯೆ. ಅವರು ಭಾರತ ವರ್ಷದ ಸಾಮಾನ್ಯ ಪ್ರಜೆಗಳಲ್ಲಿ ಸಹಾನುಭೂತಿಯನ್ನು ತೋರಿಸುವ ಚೇಷ್ಟೆಗಳನ್ನು ಕೈಕೊಳ್ಳಲಿ. ಬಡವರ ಕತ್ತಿನಮೇಲೆ ಅವರು ಹೇಗೆ ಕುಳಿತುಕೊಂಡಿದ್ದಾರೆಂಬುದನ್ನೂ ಅವರನ್ನು ಮೇಲಕ್ಕೇಳಗೊಡಿಸದವರಿಗೆ ಮನುಷ್ಯರೆಂಬ ಹೆಸರು ಸಲ್ಲದೆಂದೂ ಹೇಳು. ನಿರ್ಭಯನಾಗಿರು. ದೇವರು ನಿನ್ನ ಪರ. ಭಾರತವರ್ಷದ ಹೊಟ್ಟೆಗಿಲ್ಲದ ಮೂಢಕೋಟಿಯನ್ನು ಉದ್ಧರಿಸುತ್ತಾನೆ ಆತನು. ನಿಮ್ಮ ದೇಶದ ಯುವಕರಿಗಿಂತಲೂ ಇಲ್ಲಿಯ ರೈಲ್ವೆ ಪೋರ್ಟರು ಅಧಿಕವಾಗಿ ಸುಶಿಕ್ಷಿತನು. ಅಮೆರಿಕದ ಪ್ರತಿಯೊಂದು ಸ್ತ್ರೀಯೂ ಎಷ್ಟು ಅಧಿಕ ಸುಶಿಕ್ಷಿತಳೆಂಬುದು ಹಿಂದೂಸ್ತ್ರೀಯರಿಗೆ ಗೊತ್ತೇ ಇಲ್ಲ. ನಮ್ಮಲ್ಲಿ ಯಾತಕ್ಕೆ ಆ ಶಿಕ್ಷೆ ಇರಕೂಡದು? ನಮಗದು ಬೇಕೇಬೇಕು.

ನೀನು ದರಿದ್ರನೆಂದೆಣಿಸಬೇಡ. ಧನವೇನು! ಅದು ಶಕ್ತಿಯಲ್ಲ. ಒಳ್ಳೆಯತನ, ಪವಿತ್ರತೆ ಇವೇ ಶಕ್ತಿ. ಪ್ರಪಂಚದಲ್ಲೆಲ್ಲಾ ಹಾಗೆಯೇ ಎಂಬುದನ್ನು ಹೊರಗೆ ಬಂದು ನೋಡು.

ನಿನ್ನ............
ವಿವೇಕಾನಂದ.

ತಾ—ಕಂ.—ಇದು ಸರಿ .........ನ ಲೇಖನವು ನಾನು ನೋಡಿದ್ದರಲ್ಲೆಲ್ಲಾ ಅತ್ಯಂತ ವಿಚಿತ್ರವಾದೊಂದು ದೃಶ್ಯವು. ಅದು ವ್ಯಾಪಾರಿಯು ಸರಕುಪಟ್ಟಿಯಂತಿದ್ದುದರಿಂದ ಸಭೆಯಮುಂದೆ ಬರಲು ಅದು ಯೋಗ್ಯವಲ್ಲವೆಂದು ಗೊತ್ತಾಯಿತು. ಆದುದರಿಂದ ಅದರಲ್ಲಿ ಕೆಲವು ಭಾಗಗಳನ್ನು ಉದ್ಧರಿಸಿ ಪಕ್ಕದ ಹಜಾರದಲ್ಲಿ ಓದಿದನು. ಒಬ್ಬರಿಗಾದರೂ ಒಂದು ಪದಕ್ಕರ್ಥವಾಗಲಿಲ್ಲ. ಇದನ್ನು ಹೇಳಬೇಡ ಅವನಿಗೆ. ಹೆಚ್ಚು ವಿಷಯಗಳನ್ನು ನಾಲ್ಕು ಮಾತುಗಳಲ್ಲಿ ಸಂಕ್ಷೇಪವಾಗಿ ಅಡಗಿಸುವುದು ಒಂದು ದೊಡ್ಡ ಕುಶಲವಿದ್ಯೆ........ ಲೇಖನವನ್ನು ಕೂಡ ಮೊಟಕುಮಾಡಬೇಕಾಯಿತು. ಓದಿದ ಲೇಖನಗಳ ಸಂಖ್ಯೆ ಸಾವಿರಕ್ಕಿಂತ ಹೆಚ್ಚು. ಭಾಷಣದ ಕೊನೆಯಲ್ಲಿ ಉಪಸಂಹಾರ ಮಾಡುವಾಗ್ಯೆ ಆ ಪ್ರಕಾರ ಹುಚ್ಚಾಪಟ್ಟೆ ಕೂಗುವುದಕ್ಕೆ ಕಾಲಸಿಕ್ಕುವುದು ದುರ್ಲಭ. ಸಾಮಾನ್ಯ

ವಾಗಿ ಎಲ್ಲರಿಗೂ ಏರ್ಪಟ್ಟಿದ್ದ ಅರ್ಧ ಗಂಟೆಗೆ ಹೆಚ್ಚಾಗಿಯೇ ನನಗೆ ದೊರೆಯಿತು. ಸಭಿಕರನ್ನು ಕೊನೆಯವರೆವಿಗೂ ನಿಲ್ಲಿಸುವುದಕ್ಕಾಗಿ ಪ್ರಜಾರಂಜಕವಾಗಿ ಮಾತನಾಡುವವರನ್ನೆಲ್ಲ ಕೊನೆಗೆ ಇಟ್ಟಿದ್ದರು. ದೇವರು ಅವರನ್ನು ಹರಸಲಿ. ಅವರ ಸಹಾನುಭೂತಿ ಎಷ್ಟು! ಅವರ ತಾಳ್ಮೆ ಎಷ್ಟು! ಬೆಳಿಗ್ಗೆ ಹತ್ತರಿಂದ ರಾತ್ರಿ ಹತ್ತರವರೆಗೆ (ಮಧ್ಯದಲ್ಲಿ ಊಟಕ್ಕಾಗಿ ಅರ್ಧ ಗಂಟೆ ಮಾತ್ರ ವಿರಾಮ) ಕುಳಿತು ಒಂದಾಗುತ್ತಲೂ ಒಂದನ್ನು ಒದುತ್ತಲೇ ಇರುವರು. ಅವುಗಳಲ್ಲಿ ಮುಕ್ಕಾಲುಪಾಲು ಕೆಲಸಕ್ಕೆ ಬಾರದವು. ತಮ್ಮ ಪ್ರೀತಿಗೆ ಪಾತ್ರರಾದವರ ವಾಕ್ಕನ್ನು ಕೇಳುವುದಕ್ಕಾಗಿ ಸುಮ್ಮನೆ ಕಾದಿರುವರು ಜನರು.

ಸಿಂಹಳ ದ್ವೀಪದ ಧರ್ಮಪಾಲ ಅವರು ಪ್ರಜಾಪ್ರೀತಿಗೆ ಪಾತ್ರರಾದವರಲ್ಲಿ ಒಬ್ಬರು. ಆತನು ಒಳ್ಳೆಯ ಬೆಲ್ಲದಂತಹ ಮನುಷ್ಯ. ಸಭೆಯಲ್ಲಿ ನಮ್ಮಿಬ್ಬರಿಗೆ ಗೆಳೆತನವು ಬೆಳೆಯಿತು. ಪೂಣೆಯಿಂದ ಬಂದಿರುವ ಮಿಸ್. ಸೋರಾಬ್ಜಿ ಎಂಬುವಳೂ ಜೈನಮತ ಪ್ರತಿನಿಧಿಯಾದ ಗಾಂಧಿ ಅವರೂ ಇಲ್ಲಿ ಇನ್ನೂ ಕೊಂಚಕಾಲವಿದ್ದು ಉಪನ್ಯಾಸ ಸಂಚಾರ ಹೊರಡುವರು. ಅವರ ಪ್ರಯತ್ನವು ಸಿದ್ಧಿಸಲಿ ಎಂಬುದು ನನ್ನ ಕೋರಿಕೆ. ಈ ದೇಶದಲ್ಲಿ ಭಾಷಣಮಾಡುವುದೊಂದು ಲಾಭಕರವಾದ ಕಸಬು. ಕೆಲವು ವೇಳೆ ಅದರಿಂದ ಒಳ್ಳೆಯ ಸಂಪಾದನೆ.

ಉಪನ್ಯಾಸ ಒಂದಕ್ಕೆ ಮಿಸ್ಟರ್ ಇಂಗರ್‌ಸಾಲ್ ಎಂಬುವನಿಗೆ ಸುಮಾರು ೫೦೦–೬೦೦ ಡಾಲರುಗಳು ಸಂಭಾವನೆ. ಆತನು ಈ ದೇಶದಲ್ಲಿ ಅತ್ಯಂತ ಪ್ರಸಿದ್ಧನಾದ ಉಪನ್ಯಾಸಕನು.

೫೪೧, ಡಿಯರ್ ಬೋರನ್ ಅವೆನ್ಯೂ,

ಷಿಕಾಗೋ,

೨೪ನೇ ಜನವರಿ ೧೮೯೪

ಪ್ರಿಯ ಸ್ನೇಹಿತರೇ –

ನಿಮ್ಮ ಪತ್ರಗಳು ತಲಪಿದುವು. ನನ್ನ ವಿಷಯವಾಗಿ ಅಷ್ಟು ಸಮಾಚಾರಗಳು ನಿಮಗೆ ಮುಟ್ಟಿರುವುದು ನನಗೆ ಆಶ್ಚರ್ಯ. ನೀವು ತಿಳಿಸಿರುವ ಪತ್ರಿಕೆಯ ಸಮಾಲೋಚನವು ಒಟ್ಟು ಅಮೆರಿಕನರ ಭಾವನೆ

ಯೆಂದು ಹೇಳಲಾಗದು. ಯಾರೂ ಆ ಪತ್ರಿಕೆಯನ್ನರಿಯರಿಲ್ಲಿ. ಇಲ್ಲಿ ಅದು 'ನೀಲನಾಸಿಕ ಪ್ರೆಸಿಬಿಟೀರಿಯನ್ ಪತ್ರಿಕೆ' ಎಂದು ಕರೆಯುವ ವರ್ಗಕ್ಕೆ ಸೇರಿದುದು. ಆದರೆ ಎಲ್ಲ 'ನೀಲನಾಸಿಕಗಳೂ' ಅಸಂಭಾವಿತ ವಾದುವಲ್ಲ. ಅಮೆರಿಕಾ ವಾಸಿಗಳೂ ಅವರ ಪಾದ್ರಿಗಳಲ್ಲಿ ಅನೇಕರೂ ನನ್ನ ವಿಷಯದಲ್ಲಿ ಬಹಳವಾಗಿ ಅತಿಥಿಸತ್ಕಾರ ಪರರಾಗಿದ್ದಾರೆ. ಯಾವ ನನ್ನು ಜನರು ಆಕಾಶಕ್ಕೆತ್ತಿ ಕೊಂಡಾಡುತ್ತಿದ್ದರೋ ಆತನನ್ನು ಕೆಳಕ್ಕೆ ಳೆದು ಸ್ವಲ್ಪ ಹೆಸರು ಸಂಪಾದಿಸಬೇಕೆಂಬುದು ಆ ಪತ್ರಿಕೆಯ ಉದ್ದೇಶ. ಈ ಬಗೆಯ ಕೃತ್ರಿಮವು ಇಲ್ಲಿ ಎಲ್ಲರಿಗೂ ಗೊತ್ತು. ಅವನ್ನು ಯಾರೂ ಲೆಕ್ಕಿಸರು. ನಮ್ಮ ಇಂಡಿಯ ದೇಶದ ಪಾದ್ರಿಗಳು ಇದನ್ನು ಬಹಳ ದೊಡ್ಡದಾಗಿ ಎಣಿಸಬಹುದು. ಅದೇನೋ ನಿಸ್ಸಂಶಯ. ಹಾಗೆ ಮಾಡಿ ದಲ್ಲಿ ಅವರಿಗೆ ಈ ಪ್ರಕಾರ ಹೇಳು. 'ಎಲಾ! ಎಹುದೀ, ನೋಡು, ಈಶ್ವರನ ಕಣ್ಣು ನಿನ್ನ ಮೇಲೆ ಬಿದ್ದಿದೆ. ನಿನ್ನನ್ನು ವಿಚಾರಿಸಿಕೊಳ್ಳುತ್ತಾ ನಪ್ಪಾ ಅವನು.' ಅವರ ಹಳೆಮನೆಯ ಗೋಡೆಯು ಪಾಯದವರಿಗೂ ಕದಲಿ ಅಳ್ಳಾಡುತ್ತಲಿದೆ. ಇದಕ್ಕೆ ಹೆದರಿ ಅವರು ಹುಚ್ಚರಂತೆ ಕೂಗಲಿ. ಗೋಡೆ ಉರುಳಿಕೊಳ್ಳುವುದೇನೋ ನಿಶ್ಚಯ. ಆ ಪಾದ್ರಿಗಳ ವಿಷಯದಲ್ಲಿ ನನಗೆ ದುಃಖ. ಅಯ್ಯೋ ಪಾಪ! ಅವರು ನಮ್ಮ ಭಾರತ ವರ್ಷಕ್ಕೆ ಹೋಗಿ ನೆಮ್ಮದಿಯಾಗಿಯೂ ಶೋಕಾಗಿಯೂ ಬದುಕುವುದಕ್ಕೆ ಇಲ್ಲಿ ಹಣ ಎಳುವುದು ಕಡಿಮೆಯಾಯಿತಲ್ಲವೆ ಪ್ರಾಚ್ಯದೇಶದವರು ಇಲ್ಲಿ ಬಂದು ತಮ್ಮ ಧರ್ಮವನ್ನು ಬೋಧಿಸಿದುದರಿಂದ! ಆದರೆ ಇಲ್ಲಿಯ ಪ್ರಧಾನ ಪುರೋಹಿತರಲ್ಲಿ ಯಾರೂ ನನಗೆ ವಿರೋಧಿಗಳಲ್ಲ. ಒಳ್ಳೆಯದು! ಕೊಳ ದಲ್ಲಿ ಇಳಿದಾಗ ನಾನು ಚೆನ್ನಾಗಿ ಸ್ನಾನ ಮಾಡಲೇ ಬೇಕು. ಮಹಾ ಸಭೆಯ ಮುಂದೆ ನಾನು ಓದಿದ ನಮ್ಮ ಧರ್ಮದ ಸಂಕ್ಷಿಪ್ತ ವಿವರಣದ ವಿಷಯವಾಗಿ ಇಲ್ಲಿಯ ಒಂದು ಪತ್ರಿಕೆಯಲ್ಲಿ ಬರೆದಿರುವುದನ್ನು ಕತ್ತರಿಸಿ ನಿನಗೆ ಕಳುಹಿಸಿದ್ದೇನೆ. ನನ್ನ ಭಾಷಣದಲ್ಲಿ ಅಧಿಕಾಂಶ ಆ ಕಾಲಕ್ಕೆ ಬಾಯಲ್ಲಿ ಹೊರಟುದು, ಬರೆದು ಓದಿದುದಲ್ಲ. ಈ ದೇಶವನ್ನು ಬಿಟ್ಟು ಹೊರಡುವುದಕ್ಕೆ ಮುಂಚೆ ಅವನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಮುದ್ರಿಸಬೇಕೆಂಬುದು ನನ್ನ ಆಸೆ. ಭಾರತ ಭೂಮಿಯಿಂದ ಯಾವ

ಸಹಾಯವೂ ಬೇಕಿಲ್ಲ ನನಗೆ. ಸಾಕಾದಷ್ಟು ಇದೆ ಇಲ್ಲಿ. ನಿಮ್ಮಲ್ಲಿರುವ ಹಣದಿಂದ ಈ ಸಣ್ಣ ಸಣ್ಣ ಭಾಷಣವನ್ನು ನಮ್ಮ ದೇಶಭಾಷೆಗಳಿಗೆ ಪರಿವರ್ತನೆ ಮಾಡಿಸಿ, ಮುದ್ರಿಸಿ ಪ್ರಕಾಶಗೊಳಿಸಿ ನಾಲ್ಕು ದಿಕ್ಕುಗಳಿಗೂ ಹರಡಿರಿ. ಹೀಗೆ ಮಾಡೋಣದರಿಂದ ನಮ್ಮ ಜಾತೀಯಮನಸ್ಸು ನಮ್ಮ ಕಣ್ಣು ಮುಂದೆ ನಿಲ್ಲುವುದು. ಇನ್ನು ಕೇಂದ್ರ ವಿದ್ಯಾಲಯ ಸ್ಥಾಪನವನ್ನೂ ಅಲ್ಲಿಂದ ಭಾರತವರ್ಷದ ನಾನಾ ದಿಕ್ಕುಗಳಲ್ಲಿಯೂ ಅದರ ಶಾಖೆಗಳನ್ನು ಬೆಳೆಯಿಸಬೇಕೆಂಬುದನ್ನೂ ಮರೆಯಬೇಡಿರಿ.

ಅಮೆರಿಕ ಸ್ತ್ರೀಯರು ನನ್ನಲ್ಲಿ ತೋರಿದ ಆದರಕ್ಕಾಗಿ ನನ್ನ ಕೃತಜ್ಞತೆಯನ್ನು ವಿವರಿಸಲಾರೆನು ನಾನು. ದೇವರು ಅವರನ್ನು ಹರಸಲಿ. ಈ ದೇಶದಲ್ಲಿ ಪ್ರತಿಯೊಂದು ಚಳವಳಿಗೂ ಸ್ತ್ರೀಯರೇ ಪ್ರಾಣ. ಅಮೆರಿಕ ಜಾತಿಯವರ ಸಂಸ್ಕಾರದ ಪ್ರತಿನಿಧಿ ಸ್ವರೂಪರು ಅವರು ಏಕೆಂದರೆ ಪುರುಷರಿಗೆ ಶಿಕ್ಷಣ ಹೊಂದುವುದಕ್ಕೆ ವಿರಾಮವಿಲ್ಲ. ಸದಾ ದುಡಿಯುವುದೇ ಅವರ ಕೆಲಸ.

ಕಿ............ಡಿಯ ಪತ್ರಗಳು ತಲಪಿವೆ ನನಗೆ. ಜಾತಿಭೇದವು ಇರಬೇಕೋ ಹೋಗಬೇಕೋ ಎಂಬ ಪ್ರಶ್ನೆಗೂ ನನಗೂ ಸಂಬಂಧವಿಲ್ಲ. ನನ್ನ ಉದ್ದೇಶವೇನೆಂದರೋ! ಭಾರತ ವರ್ಷದಲ್ಲಿಯೂ ಅದರ ಹೊರಗೂ ಮಾನವ ಕುಲೋದ್ಭೂತವಾಗಿ ಬೆಳೆದ ಮಹತ್ತಾದ ಚಿಂತಾರಾಶಿಯನ್ನು ಅತಿ ದೀನ ಅತಿ ದರಿದ್ರನ ಸಮೀಪಕ್ಕೆ ಕೊಂಡೊಯ್ಯುವುದೀಗ. ತರುವಾಯ ಅವರೇ ಪರ್ಯಾಲೋಚಿಸಲಿ. ಜಾತಿಭೇದವಿರಬೇಕೋ ಕೂಡದೋ, ಸ್ತ್ರೀಯರಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕೋ ಬೇಡವೋ ಎಂಬೀ ವಿಷಯವು ನನಗೆ ಸಂಬಂಧಪಟ್ಟುದಲ್ಲ. ಪರ್ಯಾಲೋಚಿಸುವುದಕ್ಕೂ ಕಾರ್ಯ ಮಾಡುವುದಕ್ಕೂ ಸ್ವಾತಂತ್ರ್ಯವಿರುವುದೇ ಮನುಷ್ಯನ ಉನ್ನತಿಗೂ ಹಿತಕ್ಕೂ ಸಹಾಯ. ಎಲ್ಲಿ ಸ್ವಾಧೀನತೆ ಇಲ್ಲವೋ ಅಲ್ಲಿ ಮನುಷ್ಯನ ಕುಲಕ್ಕೂ ಅವನ ಜಾತಿಗೂ ಅವನತಿ ನಿಶ್ಚಯ.

ಜಾತಿ ಸಂಪ್ರದಾಯಗಳು ಹಾಗಿರಲಿ. ಪರ್ಯಾಲೋಚನೆ ಮಾಡುವ ಮತ್ತು ಕಾರ್ಯ ಮಾಡುವ ಸ್ವತಂತ್ರ ಶಕ್ತಿಗೆ ಅಡ್ಡಬರುವ ಮನುಷ್ಯ, ಪಂಗಡ, ಜಾತಿ, ಸಂಸ್ಥೆ ಇವಾವುದಾಗಲಿ (ಆ ಶಕ್ತಿಯಿಂದ ಇತರ

ರಿಗೆ ಕೆಡಕು ಉಂಟಾಗದವರೆಗೆ) ಅದು ಪೈಶಾಚಿಕವಾದುದು. ಆದುದ ರಿಂದ ಅದಕ್ಕೆ ಅಧಃಪತನವು ಸಿಕ್ಕಿಯು.

ಪ್ರತಿಯೊಬ್ಬನ ಮನೆಯ ಬಾಗಲಿಗೂ ಉಚ್ಚವಾದ ತತ್ತ್ವರಾಶಿ ಯನ್ನು ಕೊಂಡೊಯ್ಯುವ ಯಂತ್ರವೊಂದನ್ನು ಚಲನಗೊಳಿಸಿ ನಡೆಯಿಸ ಬೇಕೆಂಬುದೀಗ ನನ್ನ ಜೀವಮಾನದ ಒಂದೇ ಆಕಾಂಕ್ಷೆ. ತರುವಾಯ ಸ್ತ್ರೀಪುರುಷರು ತಮ್ಮ ತಮ್ಮ ಅದೃಷ್ಟವನ್ನು ತಾವೇ ವ್ಯವಸ್ಥೆಮಾಡಿಕೊ ಳ್ಳಲಿ. ಹಿಂದಣಕಾಲದ ನಮ್ಮ ಹಿರಿಯರೂ ಇತರ ಜಾತಿಯವರೂ ಈ ನಮ್ಮ ಜೀವಯಾತ್ರೆಗೆ ಸಂಬಂಧಿಸಿದ ಅತ್ಯಂತ ಪ್ರಧಾನ ವಿಷಯಗಳನ್ನು ಕುರಿತು ಏನು ಬಗೆದಿರುವರೋ ಅದನ್ನು ಅರಿಯಲಿ. ಇತರರು ಈಗೇನು ಮಾಡುತಲಿರುವರೆಂಬುದನ್ನು ಮುಖ್ಯವಾಗಿ ನೋಡಲಿ, ತರುವಾಯ ತೀರ್ಮಾನಮಾಡಲಿ. ರಾಸಾಯನಿಕ ದ್ರವ್ಯಗಳನ್ನು ಸೇರಿಸಿಡುವುದೀಗ ನಮ್ಮ ಕಾರ್ಯ. ಆಮೇಲೇನಾಗುವುದೋ ಅದು ಪ್ರಕೃತಿ ನಿಯಮ ಗಳ ಕೆಲಸ. ಪಡಿರಿ ದೃಢಶ್ರಮವನ್ನು, ತಾಳಿರಿ ಮನಸ್ಥೈರ್ಯವನ್ನು. ಇಡಿರಿ ಈಶ್ವರನಲ್ಲಿ ಭಕ್ತಿಯನ್ನು. ಕಾರ್ಯೋದ್ಯುಕ್ತರಾಗಿರಿ. ನಾನು ಈಗಲೋ ಆಗಲೋ ಬರುತ್ತೇನೆ. "ಧರ್ಮಕ್ಕೆ ಚ್ಯುತಿಬಾರದ ಜನ ಸಾಮಾನ್ಯದ ಏಳಿಗೆ" ಎಂಬುದು ಆದರ್ಶವಾಕ್ಯವಾಗಿ ನಿಲ್ಲಲಿ ನಿಮ್ಮ ಕಣ್ಣುಮುಂದೆ.

'ಜನಜೀವನ ನಡೆಯುವುದು ಬಡವನ ಗುಡಿಸಲಲ್ಲಿ' ಎಂಬುದನ್ನು ಜ್ಞಾಪಕದಲ್ಲಿಡಿರಿ. ಆದರೆ ಅಯ್ಯೋ! ಅವರಿಗೆ ಆರೂ ಏನೂ ಮಾಡಿಲ್ಲ. ಈಗಣಕಾಲದ ನಮ್ಮ ಸಂಸ್ಕಾರಕರು ವಿಧವಾ ವಿವಾಹ ವಿಷಯದಲ್ಲಿ ವಿಶೇಷ ಆಸಕ್ತರಾಗಿದ್ದಾರೆ. ನನಗೇನೋ ಸಂಸ್ಕಾರಗಳೆಲ್ಲದರಲ್ಲಿಯೂ ಸಹಾನುಭೂತಿಯುಂಟು. ಆದರೆ ಜನರ ಅದೃಷ್ಟವು ಅವರಲ್ಲಿ ಮುಂಡೆ ಯರಿಗೆ ಸಿಕ್ಕುವ ಗಂಡಂದಿರ ಸಂಖ್ಯೆಯಮೇಲೆ ನಿಂತಿಲ್ಲ; ಜನ ಸಾಮಾ ನ್ಯದ ಅವಸ್ಥೆಯಮೇಲೆ. ಅವರನ್ನು ಮೇಲಕ್ಕೆತ್ತಬಲ್ಲಿರಾ? ಅವರ ಸ್ವಾಭಾ ವಿಕ ಆಧ್ಯಾತ್ಮಿಕ ಪ್ರಕೃತಿಗೆ ಕುಂದು ಬಾರದಂತೆ ಅವರವರು ಅವರವರ ಕಾಲುಗಳ ಮೇಲೆ ನಿಲ್ಲುವಂತೆ ಮಾಡಬಲ್ಲಿರಾ?

ಸಮಾನತಾ, ಸ್ವಾತಂತ್ರ್ಯ, ಕಾರ್ಯ, ಉತ್ಸಾಹ ಇವುಗಳಲ್ಲಿ ಶುದ್ಧ ಪಾಶ್ಚಾತ್ಯರಾಗಿ, ಧರ್ಮ ಆಧ್ಯಾತ್ಮಿಕಬುದ್ಧಿ ಇವುಗಳಲ್ಲಿ ಶುದ್ಧ ಹಿಂದುಗಳಾಗಬಲ್ಲಿರಾ? ಇದಾಗಲೇ ಬೇಕು. ನಾವು ಇದನ್ನು ಮಾಡಲೇ ಮಾಡುತ್ತೇವೆ. ನೀವು ಹುಟ್ಟಿರುವುದು ಇದನ್ನು ಮಾಡುವುದಕ್ಕೆ. ನಿಮ್ಮಲ್ಲಿ ನಿಮಗೆ ನಂಬಿಕೆಯಿರಲಿ. ಪ್ರಬಲವಾದ ನಂಬಿಕೆಯು ಮಹಾಕಾರ್ಯಗಳಿಗೆ ಮೂಲ. ಮುಂದೆ ಮುಂದೆ ಹೋಗಿರಿ. ಪ್ರಾಣ ಹೋದರೂ ಹೋಗಲಿ, ಬಡವರಲ್ಲಿಯೂ ನೆಲಸಮನಾಗಿರುವವರಲ್ಲಿಯೂ ಸಹಾನುಭೂತಿ-ಇದೀಗ ನಮ್ಮ ಮೂಲಮಂತ್ರ. ಕೆಚ್ಚೆದೆಯ ಹುಡುಗರಿರಾ! ಮುಂದೆ ಮುಂದೆ ನಡೆಯಿರಿ.

ನಿಮ್ಮ ಕಲ್ಯಾಣಾಕಾಂಕ್ಷಿ,
ವಿವೇಕಾನಂದ.

ತಾ-ಕ. ಕೇಂದ್ರಶಾಲೆಯೊಂದನ್ನು ಸ್ಥಾಪಿಸಿ ಅಲ್ಲಿ ಶಿಕ್ಷಿತರಾದ ಮಿಷನರಿಗಳ ಮೂಲಕ ವಿದ್ಯಾ ಧರ್ಮಗಳನ್ನು ಬಡವರ ಬಾಗಿಲಿಗೆ ಕೊಂಡೊಯ್ದು ಜನಸಾಮಾನ್ಯವನ್ನು ಮೇಲಕ್ಕೆತ್ತುವ ಆಲೋಚನೆಯನ್ನು ಪ್ರಚಾರಗೊಳಿಸಿರಿ. ಎಲ್ಲರಿಗೂ ಆಸಕ್ತಿ ಹುಟ್ಟುವ ಪ್ರಯತ್ನವನ್ನು ಕೈಕೊಳ್ಳಿರಿ.

ಡಿಯರ್ ಬೋರನ್ ಪಾರ್ಕ್,
ಚಿಕಾಗೊ,
೩ ನೇ ಮಾರ್ಚ್, ೧೮೯೪.

ಪ್ರಿಯ ..................,

ಭಕ್ತಿಯು ಆಶ್ಚರ್ಯವಾದ ಪರಿಜ್ಞಾನವನ್ನುಂಟುಮಾಡತಕ್ಕುದು; ಮುಕ್ತಿಗೆ ಅದೊಂದೇ ಸಾಧನವು. ಇಷ್ಟು ಮಾತ್ರ ನಿನ್ನ ಸಂಗಡ ಒಪ್ಪಿಕೊಳ್ಳುತ್ತೇನೆ. ಆದರೆ ಅದರಲ್ಲಿ ಮುಂದಣ ಏಳಿಗೆಗೆ ತಡೆಯಾಗುವ ಮತಾಭಿಮಾನಕ್ಕೆ ಎಡೆಗೊಡುವ ಭೀತಿಯುಂಟು.

ಜ್ಞಾನವೇನೋ ಸರಿ. ಆದರೆ ಅದು ಬರೀ ಒಣ ಅರಿವಾಗಿ ಪರಿಣಮಿಸುವ ಶಂಕೆಯುಂಟು. ಭಕ್ತಿ ಮಹತ್ತಾದುದು, ಶ್ರೇಷ್ಠವಾದುದು. ಆದರೆ ಅರ್ಥವಿಲ್ಲದ ಭಾವದಲ್ಲಿ ಅದು ಅಡಗಿಹೋಗಬಹುದು. ನಮಗೆ

ಬೇಕಾದುದೇನೆಂದರೆ, ಇವೆಲ್ಲವುಗಳ ಸಾಮಂಜಸ್ಯವು. ಶ್ರೀ ರಾಮ ಕೃಷ್ಣದೇವನು ಅಂತಹ ಸಮನ್ವಯಪರಿಪೂರ್ಣಸ್ವರೂಪನು. ಅಂತಹ ಮಹಾಪುರುಷರು ಅತಿ ವಿರಳ. ಆದರೂ ಆತನನ್ನೂ ಆತನ ತತ್ತ್ವೋಪದೇಶಗಳನ್ನೂ ಆದರ್ಶವಾಗಿಟ್ಟುಕೊಂಡು ಮುಂದೆ ಮುಂದೆ ಹೋಗಬಹುದು. ನಮ್ಮಲ್ಲಿ ಪ್ರತಿಯೊಬ್ಬನೂ ವ್ಯಕ್ತಿಶಃ ಅಂತಹ ಪರಿಪೂರ್ಣತೆಯನ್ನು ಪಡೆಯಲಿಕ್ಕಾಗದೆ ಹೋಗಬಹುದಾದರೂ, ಒಬ್ಬೊಬ್ಬನು ಒಂದೊಂದು ಭಾವವನ್ನು ತನ್ನ ಜೀವನದಲ್ಲಿ ವಿಕಾಸಪಡಿಸುವುದಾದರೆ ಇವುಗಳ ಪರಸ್ಪರ ತೋಲನ ನಿರೋಧನ ಪೂರಣಗಳ ದ್ವಾರಾ ಏರು ಕೊರೆಗಳು ಸಮನಾಗಿ ಒಟ್ಟಿನಲ್ಲಿ ಸಾಮಂಜಸ್ಯವನ್ನು ಪಡೆಯಬಹುದು. ಇದು ಸಮುದಾಯ ಸಮನ್ವಯವು. ಇತರ ಧರ್ಮಗಳಿಗಿಂತಲೂ ನಿಜವಾಗಿಯೂ ಮೇಲಾದುದಿದು.

ಧರ್ಮವು ಫಲಕಾರಿಯಾಗಲು ಅದರ ಬೆಂಬಲವಾಗಿ ಉತ್ಸಾಹವಿರಬೇಕು. ಆದರೆ ಸಂಪ್ರದಾಯಗಳನ್ನು ಹೆಚ್ಚಿಸುವ ಅವಕಾಶಕ್ಕೆಡೆಗೊಡದೆ ಲಕ್ಷ್ಯವಿಟ್ಟಿರಬೇಕು. ಈ ಅವಕಾಶವನ್ನು ತಪ್ಪಿಸುವ ಬಗೆ ಹೇಗೆಂದರೆ ಸಾರ್ವಭೌಮಿಕ ಧರ್ಮದ ಉದಾರಭಾವವನ್ನೂ ಸಾಂಪ್ರದಾಯದ ಸಕಲ ಗುಣಗಳನ್ನೂ ಉಳ್ಳ ಅಸಾಂಪ್ರದಾಯಿಕ ಸಂಪ್ರದಾಯದವರಾಗುವುದರಿಂದ.

ಈಶ್ವರನು ಸರ್ವವ್ಯಾಪಿಯಾಗಿದ್ದರೂ ಆತನನ್ನರಿಯುವುದು ಕೇವಲ ಮಾನವಚರಿತ್ರದಿಂದ. ಶ್ರೀರಾಮಕೃಷ್ಣದೇವನಂತಹ ಉನ್ನತ ಚರಿತ್ರ ಪುರುಷನು ಹಿಂದೆಂದೂ ಹುಟ್ಟಲಿಲ್ಲ. ಆದುದರಿಂದ ಆತನನ್ನೇ ಕೇಂದ್ರ ಸ್ವರೂಪನನ್ನಾಗಿಟ್ಟುಕೊಂಡು ಆತನನ್ನೇ ನಾವು ಆಶ್ರಯಿಸಬೇಕು. ಪ್ರತಿಯೊಬ್ಬನೂ ಶ್ರೀರಾಮಕೃಷ್ಣದೇವರನ್ನು ಅವನವನ ಅರಿವಿಗೆ ತಕ್ಕಂತೆ, ಅವನವನಿಷ್ಟ ಬಂದಂತೆ ಎಂದರೆ ಆತನನ್ನು ಕೆಲಬರು ಸಾಕ್ಷಾತ್ ದೇವರೆಂತಲೂ ಕೆಲಬರು ರಕ್ಷಕನೆಂತಲೂ, ಕೆಲಬರು ಆಚಾರ್ಯನೆಂತಲೂ, ಮತ್ತೆ ಕೆಲಬರು ಆದರ್ಶಪುರುಷನೆಂತಲೂ ಇನ್ನೂ ಕೆಲಬರು ಮಹಾಪುರುಷನೆಂತಲೂ ಭಾವಿಸಲು ಅವಕಾಶವಿರುವುದು ಆವಶ್ಯಕ.

ಸಾಮಾಜಿಕ ಸಾಮ್ಯವನ್ನಾಗಲೀ ವೈಷಮ್ಯವನ್ನಾಗಲೀ ಪ್ರಚಾರಗೊಳಿಸುವ ಕಾರ್ಯ ನಮ್ಮದಲ್ಲ. ಆದರೆ ಪ್ರತಿಯೊಬ್ಬನಿಗೂ ಸಮಾನಾಧಿಕಾರವಿರುವುದೆಂದೂ, ಸಕಲ ವಿಧಗಳಲ್ಲಿಯೂ ಪರ್ಯಾಲೋಚನೆ ಮತ್ತು ಕಾರ್ಯ ಸ್ವಾತಂತ್ರ್ಯವಿರಬೇಕೆಂಬುದೀಗ ನಾವು ಒತ್ತಿ ಒತ್ತಿ ಹೇಳಬೇಕಾದುದು.

ನಿರಾಕಾರ ಈಶ್ವರವಾದಿಯನ್ನಾಗಲಿ, ಸರ್ವಂ ಬ್ರಹ್ಮಮಯಂ ಜಗತ್ ಎಂದು ಹೇಳುವವನನ್ನಾಗಲಿ, ಅದ್ವೈತಿಯನ್ನಾಗಲಿ, ಬಹು ದೇವವಾದಿಯನ್ನಾಗಲಿ, ಅಜ್ಞೇಯವಾದಿಯನ್ನಾಗಲಿ, ನಾಸ್ತಿಕನನ್ನಾಗಲಿ, ನಾವು ಯಾರನ್ನೂ ಬಿಟ್ಟುಕೊಡುವುದಿಲ್ಲ. ಶಿಷ್ಯನಾಗುವುದಕ್ಕೆ ಬೇಕಾದ ಯೋಗ್ಯತೆ ಯಾವುದೆಂದರೆ ಅತ್ಯಂತ ಉದಾರವಾದ ಅತ್ಯಂತ ಗಂಭೀರವಾದ ಚರಿತೆ ಅಥವಾ ನಡತೆ. ಈ ನಡತೆಯು ವಿಷಯದಲ್ಲಿ ಕೂಡ ಹೀಗೆಯೇ ಇರಬೇಕೆಂಬ ವಿಶೇಷ ನೈತಿಕ ಧರ್ಮಾಚರಣೆಯಾವುದನ್ನೂ ವಿಧಿಸುವುದಿಲ್ಲ ನಾವು. ಊಟ ಉಪಚಾರಗಳಲ್ಲಿ ಹೀಗೆಯೇ ಇರಬೇಕೆಂಬ ನಿರ್ಬಂಧವೂ ಇಲ್ಲ. ನಮ್ಮ ನಡೆನುಡಿಗಳಿಂದ ಇತರರಿಗೆ ಯಾವ ಬಗೆಯ ಕೇಡಕೂ ಉಂಟಾಗದವರಿಗೆ

ಯಾವುದು ಉನ್ನತಿಗೆ ವಿಘ್ನಪ್ರಾಯವಾಗಿ ನಿಲ್ಲುವುದೋ ಅಥವಾ ನೆಲಕ್ಕುರುಳುವುದಕ್ಕೆ ಸಹಾಯವಾಗುವುದೋ ಅದೇ ಪಾಪ, ಅದೇ ಅಧರ್ಮ. ಉನ್ನತಿಗೆ ಯಾವುದು ಸಹಾಯವಾಗುವುದೋ ಅದೇ ಧರ್ಮ.

ಯಾವನೇ ಆಗಲಿ ಆತನ ಪ್ರಕೃತಿಗೆ ಯಾವುದು ತಕ್ಕುದಾಗಿ ಆತನ ಏಳಿಗೆಗೆ ಸಹಾಯವಾಗುವುದೋ ಅದನ್ನರಿತು ಅವಲಂಬಿಸಿ ಅದರಂತೆ ನಡೆಯಲು ಸ್ವತಂತ್ರನಾತನು. ಹೇಗೆಂದರೆ ಮಾಂಸಾಹಾರನು ಓರ್ವನಿಗೆ ಅನುಕೂಲವಾಗಬಹುದು, ಮತ್ತೊಬ್ಬನಿಗೆ ಪ್ರತಿಕೂಲವಾಗಬಹುದು. ಬೇರೊಬ್ಬನಿಗೆ ಫಲಾಹಾರವು ಒಗ್ಗಬಹುದು. ಅವನವನ ವಿಶೇಷವನ್ನು ಅವನವನು ಇಟ್ಟುಕೊಂಡಿರಲಿ. ಆದರೆ ಓರ್ವನ ಆಚಾರವನ್ನು ಮತ್ತೊಬ್ಬನು ಖಂಡಿಸುವುದಕ್ಕೆ ಅಧಿಕಾರವಾವುದೂ ಇಲ್ಲ ಆ ಆಚಾರ ತನಗೆ ಸರಿಹೋಗುವುದಿಲ್ಲವೆಂದು. ತನ್ನಂತೆ ಇತರರೂ ಆಚರಿಸಬೇಕೆಂದು ಬಲಾ

ತ್ಯರಿಸುವುದಕ್ಕೂ ಓರ್ವನಿಗೆ ಅಧಿಕಾರವಿಲ್ಲ. ಪತಿಯು ತನ್ನ ಪತಿಯ ಉನ್ನತಿಗೆ ಸಹಾಯಕಳಾಗಿರಬಹುದು ಕೆಲವು ವೇಳೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಅವನಿಗೆ ನಿಜವಾಗಿಯೂ ವಿಘ್ನಪ್ರಾಯಗಳಾಗಿ ನಿಲ್ಲಬಹುದು. ಆದರೆ ಮದುವೆಯಾದ ಶಿಷ್ಯನು ಸರಿಯಲ್ಲವೆಂದು ಮದುವೆಯಾಗದವನು ಹೇಳುವುದಕ್ಕೆ ಅಧಿಕಾರವೇ ಇಲ್ಲ. ಇನ್ನು ತನ್ನ ನೈತಿಕಾದರ್ಶವನ್ನೇ ತನ್ನ ಒಡಹುಟ್ಟಿದವರ ಮುಂದೆ ಬಲಾತ್ಕಾರವಾಗಿಡುವುದಕ್ಕೂ ಅಧಿಕಾರವಿಲ್ಲ.

ಸರ್ವಭೂತವೂ ಬ್ರಹ್ಮಸ್ವರೂಪವೆಂಬುದು ನಮ್ಮ ನಂಬಿಕೆ. ಪ್ರತಿ ಆತ್ಮನೂ ಅಜ್ಞಾನಮೋಘಗಳಿಂದ ಮುಚ್ಚಿದೊಂದು ಸೂರ್ಯನು. ವ್ಯಕ್ತಿಗೂ ವ್ಯಕ್ತಿಗೂ ವ್ಯತ್ಯಾಸವಿರುವುದೆಲ್ಲಿ ಎಂದರೆ ಆತ್ಮನನ್ನು ಮುಸುಕಿಕೊಂಡಿರುವ ಅಜ್ಞಾನಮೋಘಜಾಲಗಳ ಸಾಂದ್ರತೆಯಲ್ಲಿ. ಒಂದು ಆತ್ಮನ ಅಜ್ಞಾನಮೋಘಾವರಣವು ಬಲುದಟ್ಟ, ಮತ್ತೊಂದು ತೆಳು. ತಿಳಿದೋ ತಿಳಿಯದೆಯೋ ಸರ್ವಧರ್ಮಗಳಿಗೂ ಇದೇ ತಳಹದಿ ಎಂಬುದು ನಮ್ಮ ನಂಬಿಕೆ. ಭೌತಿಕ, ಮಾನಸಿಕ, ಆಧ್ಯಾತ್ಮಿಕ ಭೂಮಿಗಳಲ್ಲಿ ಮಾನವೋನ್ನತಿಯ ಸಮಗ್ರಚರಿತೆಗೂ ಇದೇ ವ್ಯಾಖ್ಯಾನ—ಇದೇ ಸಮಾಧಾನ. ಉಪಾಧಿಭೇದವೇ ಆತ್ಮಸ್ವರೂಪಪ್ರದರ್ಶನವ್ಯತ್ಯಾಸಕ್ಕೆ ಮೂಲ ಎಂದರೆ, ಆತ್ಮಸ್ವರೂಪವು ಬೇರೆ ಬೇರೆ ಭೂಮಿಗಳಲ್ಲಿ ವ್ಯಕ್ತವಾಗುತಲಿದೆ.

ಇದೇ ವೇದಸಾರವೆಂಬುದು ನಮ್ಮ ನಂಬಿಕೆ.

ಪ್ರತಿಯೊಬ್ಬನೂ ಇತರರನ್ನು ಈ ಭಾವದಿಂದ ಎಂದರೆ ಈಶ್ವರನೆಂದು ಭಾವಿಸಿ ಈಶ್ವರಭಾವದಿಂದಲೇ ವ್ಯವಹಾರವನ್ನು ನಡೆಸುವುದೀಗ ನಮ್ಮ ಕರ್ತವ್ಯವೆಂಬುದು ನಮ್ಮ ನಂಬಿಕೆ. ಇತರರನ್ನು ದ್ವೇಷಿಸಿ, ನಿಂದಿಸಿ, ಅವರಿಗೆ ಯಾವ ವಿಧದಲ್ಲಾಗಲೀ ಕೇಡನ್ನು ಬಯಸುವುದು ನಮ್ಮ ಕರ್ತವ್ಯವಲ್ಲ. ಇದು ಸನ್ಯಾಸಿಯ ಕರ್ತವ್ಯವಲ್ಲದೆ ಸಕಲ ಸ್ತ್ರೀಪುರುಷರ ಕರ್ತವ್ಯವೂ ಇದೇ.

ಆತ್ಮನಿಗೆ ಲಿಂಗವಿಲ್ಲ, ಜಾತಿಯಿಲ್ಲ, ಅಪೂರ್ಣತೆಯಿಲ್ಲ.

ವೇದ, ದರ್ಶನ, ಪುರಾಣ, ತಂತ್ರ ಇವುಗಳಾವುದರದಲ್ಲಿಯೂ ಆತ್ಮನಿಗೆ ಲಿಂಗ, ಸಂಪ್ರದಾಯ ಜಾತಿಗಳುಂಟೆಂದು ಹೇಳಿಲ್ಲವೆಂಬುದು

ನಮ್ಮ ನಂಬಿಕೆ. ಆದುದರಿಂದ, ಸಮಾಜ ಸಂಸ್ಕಾರಗಳಿಗೂ ಧರ್ಮಕ್ಕೂ ಸಂಬಂಧವೆಲ್ಲಿಯದು' ಎಂಬುವರ ಮತವೇ ನಮ್ಮ ಮತ. ಆದರೆ ಸಮಾಜ ನಿಯಮಗಳನ್ನು ವಿಧಿಸುವುದಕ್ಕೂ ವ್ಯಕ್ತಿವೈಷಮ್ಯವನ್ನು ಒತ್ತಿ ಹೇಳುವುದಕ್ಕೂ ಧರ್ಮಕ್ಕೆ ಅಧಿಕಾರವಿಲ್ಲವೆಂಬ ನಮ್ಮ ಮತವನ್ನು ಅವರೂ ಅಂಗೀಕರಿಸಬೇಕಲ್ಲವೆ! ಏಕೆಂದರೆ ಕಾಲ್ಪನಿಕವೂ ಭಯಾವಹವೂ ಆದೀವೈಷಮ್ಯಗಳನ್ನು ತೊಡೆಯುವುದೇ ಧರ್ಮದ ಲಕ್ಷ್ಯವಷ್ಟೆ!

ಈ ವೈಷಮ್ಯದ ಮೂಲಕವೇ ಚರಮ ಸಮತ್ವವೂ ಏಕತ್ವವೂ ಪ್ರಾಪ್ತವಾಗುವುದೆಂದು ವಾದಿಸುವುದಾದರೆ ಅದಕ್ಕೆ ನಮ್ಮ ಉತ್ತರ ವಿದೀಗ. ಮಣ್ಣಿನಿಂದ ಮಣ್ಣು ಶುದ್ಧಿಯಾಗಲಾರದೆಂದು ಈ ಧರ್ಮವೇ ಪುನಃ ಪುನಃ ಘೋಷಿಸುತ್ತಿರುವುದಲ್ಲವೆ? ವೈಷಮ್ಯದಿಂದ ಸಮತ್ವ ಬರುವುದೆಂದರೇನು? ಒರ್ವನು ಪಾಪಕರ್ಮಗಳನ್ನು ಮಾಡಿ ಪುಣ್ಯವಂತನಾಗಬಹುದೇನ?

ಸಾಮಾಜಿಕ ವಿಧಾನಗಳು ಸಮಾಜದ ಸಾಂಪತ್ತಿಕ ಅವಸ್ಥೆಗಳನ್ನನುಸರಿಸಿ ಉತ್ಪನ್ನವಾಗಿವೆ ಧರ್ಮದ ಅನುಮೋದನದಿಂದ. ಸಾಮಾಜಿಕ ವ್ಯಾಪಾರಗಳಲ್ಲಿ ಧರ್ಮವು ತಲೆಹಾಕಿದುದೀಗ ಅತಿ ಘೋರವಾದ ತಪ್ಪು. ಆದರೆ ಸಮಾಜ ಸುಧಾರಣೆಯು ತನ್ನ ಕಾರ್ಯವಲ್ಲವೆಂದು ಧರ್ಮವು ಹೀಗೆ ನಟಿಸಿ ತನ್ನನ್ನು ತಾನೇ ಖಂಡನೆ ಮಾಡಿಕೊಳ್ಳುತ್ತದೆ! ಒಳ್ಳೆಯದು. ನಮಗೆ ಬೇಕಾದುದೇನು? ಸಮಾಜ ಸುಧಾರಕನಾಗಿ ಧರ್ಮವು ನಿಲ್ಲಕೂಡದು. ಇನ್ನೂ ಸಮಾಜ ಸುಧಾರಣೆಯ ನಿಯಮಗಳನ್ನು ವಿಧಿಸುವ ಅಧಿಕಾರವು ಧರ್ಮಕ್ಕಿಲ್ಲವೆಂದು ನಾವು ಒತ್ತಿ ಹೇಳುತ್ತೇವೆ. ಕೈ ತೆಗೆಯಿರಿ. ನಿಮ್ಮ ಹದ್ದಿನಲ್ಲಿ ನೀವಿರಿ. ಎಲ್ಲವೂ ಸರಿಹೋಗುವುದು.

೧. ಮೊದಲೇ ಮನುಷ್ಯನಲ್ಲಿ ಹುದುಗಿರುವ ಪರಿಪೂರ್ಣತೆಯನ್ನು ಪ್ರಕಾಶಪಡಿಸೋಣವೇ ಶಿಕ್ಷಣ

೨. ಮೊದಲೇ ಮನುಷ್ಯನಲ್ಲಿ ಅಡಗಿರುವ ಬ್ರಹ್ಮತ್ವವನ್ನು ಪ್ರಕಾಶಪಡಿಸುವುದೇ ಧರ್ಮ.

ಆದುದರಿಂದ ದಾರಿಗಡ್ಡಬರುವ ತಡೆಗಳನ್ನು ಒತ್ತರಿಸುವುದೇ ಉಪದೇಶಕನ ಕರ್ತವ್ಯ. ನಿಮ್ಮ ಕೈದೂರ ಮಾಡಿ, ಎಲ್ಲವೂ ಸರಿಹೋಗುವು

ದೆಂದು ನಾನು ಯಾವಾಗಲೂ ಹೇಳುವೆನಷ್ಟೆ. ದಾರಿ ಸರಿಮಾಡುವುದು ನಮ್ಮ ಕರ್ತವ್ಯ. ಉಳಿದುದು ಈಶ್ವರನ ಕಾರ್ಯ.

ಆದುದರಿಂದ ನೀವು ಮುಖ್ಯವಾಗಿ ನೆನಪಿನಲ್ಲಿಡಬೇಕಾದುದೇನೆಂದರೆ, ಧರ್ಮವಾಯಿತು ಆತ್ಮನಾಯಿತು ಅವೆರಡಕ್ಕೇ ಗಂಟು. ಸಾಮಾಜಿಕ ವ್ಯಾಪಾರಗಳಲ್ಲಿ ಧರ್ಮವು ತಲೆಹಾಕುವುದಕ್ಕೆ ಅದಕ್ಕಾವ ಅಧಿಕಾರವೂ ಇಲ್ಲ. ಹಿಂದೆ ಆಗಿರುವ ಅನರ್ಥಗಳಿಗೂ ಇದು ಅನ್ವಯಿಸುವುದೆಂಬುದನ್ನು ಕೂಡ ಜ್ಞಾಪಕದಲ್ಲಿಡಬೇಕು ನೀನು. ಇದರ ಸಮಾಚಾರವೇನೆಂಬೆಯೋ—ಒಬ್ಬನು ಮತ್ತೊಬ್ಬನ ಆಸ್ತಿಯನ್ನು ಬಲಾತ್ಕರಿಸಿ ದೋಚಿಕೊಳ್ಳಲು ಕಳೆದುಕೊಂಡವನು ತನ್ನ ಆಸ್ತಿಯನ್ನು ಮರಳಿ ಕಿತ್ತುಕೊಳ್ಳುವ ಪ್ರಯತ್ನ ಪಟ್ಟರೆ ಮೊದಲು ದೋಚಿಕೊಂಡವನು ಮೂಗಿನಲ್ಲಿ ಅಳುತ ಮಾನವನ ಹಕ್ಕಿನ ಪವಿತ್ರತೆಯನ್ನು ಸಾರುವಂತೆ !!!

ಪ್ರತಿಯೊಂದು ಸಾಮಾಜಿಕ ವಿಷಯದಲ್ಲಿಯೂ ಕೋಟ್ಯಂತರ ಪ್ರಜೆಗಳ ದುರಿತಕ್ಕೆ ಕಾರಣವಾಗಿ ಪುರೋಹಿತರು ತಲೆಹಾಕಲು ಅವರಿಗೇನು ಹಕ್ಕು ?

ಮಾಂಸವನ್ನು ಭುಂಜಿಸುವ ಕ್ಷತ್ರಿಯರ ಕಥೆಯನ್ನು ಹೇಳುವೆಯಷ್ಟೆ! ಮಾಂಸವೋ ಗೀಂಸವೋ ಹಿಂದೂ ಧರ್ಮದಲ್ಲಿ ಮಹತ್ತಾದುದೂ, ಸುಂದರವಾದುದೂ ಯಾವ ಯಾವುದು ಇದೆಯೋ ಅದೆಲ್ಲಕ್ಕೂ ಅವರೇ ಮೂಲಪುರುಷರು. ಉಪನಿಷತ್ತುಗಳನ್ನು ಬರೆದವರಾರು ? ರಾಮನಾರು ? ಕೃಷ್ಣನಾರು ? ಬುದ್ಧದೇವನಾರು ? ಜೈನರ ತೀರ್ಥಂಕರರಾರು ? ಕ್ಷತ್ರಿಯರು ಧರ್ಮೋಪದೇಶವನ್ನು ಮಾಡಿದಾಗಲೆಲ್ಲಾ ಅವರು ಜಾತಿವರ್ಣಗಳನ್ನೆಣಿಸದೆ ಸರ್ವರಿಗೂ ಧರ್ಮಾಧಿಕಾರವನ್ನು ಕೊಟ್ಟಿರುವರು. ಬ್ರಾಹ್ಮಣರು ಏನಾದರೂ ಬರೆಯಲಿ ಅದರ ಆವ ಅಧಿಕಾರವೂ ಇತರರಿಗಿಲ್ಲವೆಂದು ಹೇಳಿರುವರು. ಗೀತೆಯನ್ನೂ ವ್ಯಾಸಸೂತ್ರಗಳನ್ನೂ ಓದು ಅಲ್ಲವೇ ಓದಿಸಿಕೇಳು. ಗೀತೆಯಲ್ಲಿ ಸಕಲ ಸ್ತ್ರೀಪುರುಷರಿಗೂ ಸಕಲ ಜಾತಿಯವರಿಗೂ ಸಕಲ ವರ್ಣದವರಿಗೂ ಮುಕ್ತಿಮಾರ್ಗವು ತೋರಿರುವುದು. ವ್ಯಾಸನಾದರೆ ಈ ಬಡಶೂದ್ರರನ್ನು ವಂಚಿಸುವುಕ್ಕಾಗಿ ವೇದಗಳಿಗೆ ಕಪೋಲಕಲ್ಪಿತ ಅರ್ಥವನ್ನು ಹೇಳಿರುವನು. ಈಶ್ವರನೇನು ? ನಿನ್ನಂತಹ ಹೇಡಿ

ಯಾರ ಹುಚ್ಚನೇನು ಆತನ ಕೃಪಾ ಪ್ರವಾಹವನ್ನು ಪ್ರಾಂಪದ ತುಂಡು ತಡೆಯುವುದಕ್ಕೆ ! ಹಾಗಿದ್ದಪಕ್ಷದಲ್ಲಿ ಅವನೊಂದು ಬಿಡುಗಾಪೂ ಬಾಳನು.

ನನ್ನಲ್ಲಿ ನಿನಗಾವ ಆಸೆಯೂ ಬೇಡ. ನಾನು ನಿನಗೆ ಹಿಂದೆ ಹೇಳಿದಂತೆ, ಹಿಂದೆ ಬರೆದಂತೆ ಭಾರತವರ್ಷದ ಉನ್ನತಿಯು ಭಾರತೀಯರಿಂದಲೇ ಆಗಬೇಕು. ಇದು ನನ್ನ ದೃಢವಿಶ್ವಾಸ- ಆದುದರಿಂದ ಮಾತೃ ಭೂಮಿಯ ಯುವಕರುಗಳಿರಾ ! ಈ ನೂತನ ದರ್ಶನದ ವಿಷಯದಲ್ಲಿ ನೀರಾರು ಮಂದಿ ಉನ್ಮಾದರಾಗಬಲ್ಲಿರಾ ? ಆಲೋಚನೆ ಮಾಡಿ, ವಿಷಯ ಸಂಗ್ರಹಮಾಡಿ, ಶ್ರೀರಾಮ ಕೃಷ್ಣದೇವನ ಚರಿತೆಯನ್ನು, ಅವರ ವಿಷಯದಲ್ಲಿ ಪ್ರಚಾರಗೊಂಡಿರುವ ಅತಿಮಾನುಷಕೃತ್ಯಗಳನ್ನು ಸಂಕಲ್ಪ ಪೂರ್ವಕವಾಗಿ ಬಿಟ್ಟು ಬರೆಯಿರಿ. ಅವರು ಉಪದೇಶಿಸಿದ ತತ್ವಗಳಿಗೆ ದೃಷ್ಟಾಂತವಾಗಿ ಅವರ ಚರಿತೆಯನ್ನು ಬರೆಯಬೇಕು. ನನ್ನನ್ನಾಗಲೀ ಇನ್ನಾಬರುಕಿರುವ ಮಹಾತ್ಮರನ್ನಾಗಲೀ ಅದರಲ್ಲಿ ಸೇರಿಸಕೂಡದು. ನಿಮ್ಮ ಮುಖ್ಯ ಲಕ್ಷ್ಯವೇನಾಗಿರಬೇಕೆಂದರೆ ಅವರು ಉಪದೇಶಿಸಿದುದನ್ನು ಅವರ ಚರಿತ್ರೆಯ ಮೂಲಕ ಪ್ರಪಂಚಕ್ಕೆ ಕೊಡುವುದು.

ಅಯೋಗ್ಯನಾದರೂ ನನ್ನಿಂದೊಂದು ಕಾರ್ಯವಾಗಬೇಕಾಗಿದ್ದಿತು. ಅದೇನೆಂದರೆ ನನ್ನ ವಶಕ್ಕೆ ಕೊಟ್ಟಿದ್ದ ರತ್ನಭರಿತವಾದ ಪೆಟ್ಟಿಗೆಯನ್ನು ನಿಮ್ಮ ವಶಕ್ಕೊಪ್ಪಿಸುವುದೀಗ. ನಿಮಗೇ ಏತಕ್ಕೆಂದು ಪ್ರಶ್ನೆ ಮಾಡಿದರೆ ಆಷಾಢಭೂತಿಗಳೂ, ಹೊಟ್ಟೆ ಕಿಚ್ಚಿನವರೂ, ಗುಲಾಮರ ಸ್ವಭಾವವುಳ್ಳವರೂ, ಅಂಜುಕುಳಿಗಳೂ, ಈ ಜಡವಾದ ಮಣ್ಣೇ ಸರ್ವವು ಎಂದು ನಂಬಿಕೊಂಡಿರುವವರೂ ಇವರುಗಳಿಂದೇನೂ ಆಗದು. ಗುಲಾಮರಿಗೆ ಸಹಜವಾದ ಹೊಟ್ಟೆ ಕಿಚ್ಚಿದೆಯಲ್ಲಾ ಅದು ನಮ್ಮ ಜಾತಿ ಸ್ವಭಾವಕ್ಕೇ ದೊಡ್ಡದೊಂದು ಕುಂದು. ಸರ್ವಶಕ್ತನಾದ ಈಶ್ವರನಿಂದಲೂ ಏನೂ ಮಾಡಲಾಗದು ಈ ಮಾತ್ಸರ್ಯದಿಂದ.

ನನ್ನ ಕಾರ್ಯವನ್ನು ನಾನು ಮಾಡಿ ಮುಗಿಸಿ ಮೃತನಾಗಿರುವೆನೆಂದು ನನ್ನನ್ನು ಭಾವಿಸಿರಿ. ಸಕಲ ಭಾರವೂ ನಿಮ್ಮ ತಲೆಗಳ ಮೇಲಿರುವುದೆಂದು ಭಾವಿಸಿರಿ. ಈ ಕಾರ್ಯವನ್ನೆಸಗುವುದಕ್ಕೆ ದೇವರು ನಿಮ್ಮನ್ನೇ ನಿಯ

ವಿಃಸಿದ್ಧಾಸೆಂದು ಮಾತೃಭೂಮಿಯ ಯುವಕರಾದ ನೀವು ಭಾವಿಸಿರಿ. ಅಯ್ಯೋ! ಹೆಗಲು ಕೊಡಿರಿ. ಈಶ್ವರನು ನಿಮ್ಮನ್ನು ಹರಸಲಿ. ನನ್ನನ್ನು ಸಂಪೂರ್ಣವಾಗಿ ಬಿಟ್ಟು ಬಿಡಿ. ನನ್ನ ಜ್ಞಾಪಕವೇ ಬೇಡ ನಿಮಗೆ. ಈ ನೂತನ ಆದರ್ಶವನ್ನೂ, ಈ ನೂತನ ಸಿದ್ಧಾಂತವನ್ನೂ, ಈ ನವಜೀವನ ವನ್ನೂ ಸಾರಿರಿ. ಯಾರಿಗಾಗಲೀ ಯಾವ ಪದ್ಧತಿಗಾಗಲೀ ವಿರೋಧ ವಾಗಿ ಪ್ರಸಂಗ ಮಾಡಬೇಡಿರಿ. ಜಾತಿಯ ಪಕ್ಷವಾಗಿಯಾಗಲೀ, ಪ್ರತಿ ಪಕ್ಷವಾಗಿಯಾಗಲೀ, ಇತರ ಇನ್ನಾವ ಸಾಮಾಜಿಕ ದೋಷಗಳನ್ನು ಕುರಿತಾಗಲೀ ಪ್ರಸಂಗಬೇಡ. 'ಕೈದೂರ ಮಾಡಿ' ಎಂಬುದನ್ನು ಒತ್ತಿ ಒತ್ತಿ ಹೇಳಿರಿ. ಆಮೇಲೆ ಪರಿಹೋಗುವುದೆಲ್ಲವೂ.

ಧೈರ್ಯಶಾಲಿಗಳೂ, ಸ್ಥೈರ್ಯಶಾಲಿಗಳೂ, ಎನ್ನ ಪ್ರಿಯರೂ ಆದ ನಿಮ್ಮನ್ನು ಆಶೀರ್ವಾದ ಮಾಡುವ

ನಿಮ್ಮ ವಿವೇಕಾನಂದ.

ಷಿಕಾಗೋ,

೨೮ ನೇ ಮೇ, ೧೮೯೪.

ಪ್ರಿಯ ...............

ನಾನು ನ್ಯೂಯಾರ್ಕಿಗೂ ಬೋಸ್ಟನ್ನಿಗೂ ಅಲೆಯುತ್ತಿದ್ದೆನಾದಕಾರಣ ಇದಕ್ಕೆ ಮುಂಚೆ ಪತ್ರ ಬರೆಯಲಾಗಲಿಲ್ಲ. ಇಂಡಿಯಕ್ಕೆ ನಾನೆಂದು ಹಿಂದಿರುಗುವೆನೋ ನಾನರಿಯೆ.. ನನಗೆ ಬೆಂಬಲವಾಗಿ ನಿಂತು ದಾರಿ ತೋರಿಸುತ್ತಲಿರುವ ಈಶ್ವರನ ಕೈಯಲ್ಲಿ ಸಕಲವನ್ನೂ ಬಿಡುವುದು ಉತ್ತಮ. ನಾನು ಹುಟ್ಟಲೇ ಇಲ್ಲವೆಂದೆಣಿಸಿ ನನ್ನನ್ನುಳಿದು ಕಾರ್ಯೋದ್ಯುಕ್ತನಾಗು. ಯಾರಿಗೂ ಯಾವುದಕ್ಕೂ ಕಾಯಬೇಡ. ಮಾಡು ನಿನ್ನ ಕೈಲಾದುದನ್ನು, ಇಡಬೇಡ ಆರಮೇಲೆಯೂ ಆಸೆಯನ್ನು.

ನಾನಿಲ್ಲಿ ಹೆಚ್ಚಾಗಿ ಉಪನ್ಯಾಸಕಾರ್ಯವನ್ನು ಮಾಡಿದ್ದೇನೆ. ಇಲ್ಲಿಯ ಖರ್ಚಾದರೋ ಭಯಂಕರ. ಹಣ ಸುಮ್ಮನೆ ಹಾರಿಹೋಗುತ್ತದೆ. ಅತ್ಯಂತ ಶೀಲವಂತರೂ ದೊಡ್ಡಮನೆತನದವರೂ ನಾನು ಹೋದೆಡೆಯಲ್ಲೆಲ್ಲಾ ನನ್ನನ್ನು ಸಂರಕ್ಷಿಸಿ ಕಾಪಾಡುತ್ತಿದ್ದರು.

ಈ ಬಿಸಿಲು ಕಾಲದಲ್ಲಿ ನಾನು ಹೊರಡುವೆನೋ ಇಲ್ಲವೋ ನಾ ಕಾಣೆ—ಮುಕ್ಕಾಲು ಪಾಲು ಇಲ್ಲ. ಅಷ್ಟರಲ್ಲಿಯೇ ನಿನ್ನ ಏರ್ಪಾಡು ಗಳನ್ನು ವ್ಯವಸ್ಥೆಗೆ ತಂದು ಕೆಲಸವನ್ನು ಮುಂದರಿಸು. ಸಕಲವನ್ನೂ ನಾನು ಮಾಡಬಲ್ಲೆನೆಂದು ನಂಬು. ದೇವರು ನಮ್ಮೊಡನಿದ್ದಾನೆಂದು ತಿಳಿದು, ಎಲೈ ಧೈರ್ಯಶಾಲಿಗಳಿರಾ! ಮುಂದರಿಯಿರಿ. ನನ್ನ ಜನ್ಮಭೂ ಮಿಯಲ್ಲಿ ಬೇಕಾದ ಆದರಣೆ ಆಯಿತು. ಆದರಣೆಯೋ ಇಲ್ಲವೋ ನಿದ್ದೆ ಹೋಗಬೇಡ, ಸಡಿಲ ಬಿಡಬೇಡ. ನಮ್ಮ ಏರ್ಪಾಡುಗಳಲ್ಲಿ ಎಳ್ಳಿನಷ್ಟೂ ಕೂಡ ಇನ್ನೂ ನೇರವೇರಿಲ್ಲವೆಂಬುದನ್ನು ನೆನಪಿನಲ್ಲಿಡಬೇಕು ನೀನು. ಸುಶಿಕ್ಷಿತರಾದ ಯುವಕರ ಮೇಲೆ ನಿನ್ನ ಪ್ರಭಾವವನ್ನು ವಿಸ್ತರಿಸಿ ಅವ ರನ್ನು ಹಿಡಿದು ಒಟ್ಟಿಗೆ ಸೇರಿಸಿ ಕಟ್ಟಿ ಹಿಡಿಯಿರಿ. ಬೃಹತ್ ಸ್ವಾರ್ಥತ್ಯಾ ಗದಿಂದಲೇ ಬೃಹತ್ಕಾರ್ಯಗಳಾಗತಕ್ಕುದು. ಸ್ವಾರ್ಥತೆ ಬೇಡ, ಹೆಸರು ಬೇಡ, ಕೀರ್ತಿಬೇಡ ನಿನಗೂ ನನಿಗೂ ಎನ್ನಗುರುವಿಗೂ. ಕಾರ್ಯ ನಡೆ ಯಿಸು. ಕೆಚ್ಚೆದೆಯುಳ್ಳವರೂ, ಉದಾರಮನಸ್ಕರೂ, ಶೀಲವಂತರೂ ಆದ ಎನ್ನ ಹುಡುಗರಿರಾ! ನಮ್ಮ ಆದರ್ಶವನ್ನು ನೆರವೇರಿಸಿರಿ. ಸೊಂಟ ಕಟ್ಟಿ ಹೆಗಲು ಕೊಡಿರಿ. ಹೆಸರು, ಕೀರ್ತಿ ಇನ್ನಾವುದಾದರೂ ಕೆಲಸಕ್ಕೆ ಬಾರದುದು–ಇವಕ್ಕಾಗಿ ಹಿಂದಿರುಗಿ ನೋಡಬೇಡಿರಿ. 'ನಾನು' ಎಂಬು ದನ್ನು ನೀರಿನಲ್ಲಿ ಮುಳುಗಿಸಿ ಕೆಲಸಮಾಡಿರಿ. ಹುಲ್ಲು ಕಡ್ಡಿಗಳನ್ನು ಸೇ ರಿಸಿ ಹಗ್ಗ ಹೊಸೆದರೆ ಅದು ಮದ್ದಾನೆಯನ್ನು ಕೂಡ ಕಟ್ಟಲಾಪದು. ಭಗವಂತನು ನಿಮ್ಮನ್ನೆಲ್ಲಾ ಹರಸಲಿ. ಅವನ ಶಕ್ತಿಯು ನಿಮ್ಮೆಲ್ಲರನ್ನೂ ಪ್ರೇರಿಸಲಿ. ಈಗಾಗಲೇ ಆ ಶಕ್ತಿ ನಿಮ್ಮಲ್ಲಿರುವುದೆಂದು ನನ್ನ ನಂಬಿಕೆ. 'ಎಚ್ಚರಗೊಳ್ಳಿರಿ, ಏಳಿರಿ. ಕೊನೆ ಮುಟ್ಟುವವರೆಗೆ ನಿಲ್ಲಬೇಡಿರಿ' ಎಂದು ವೇದವು ಘೋಷಿಸುತ್ತಿರುವುದಲ್ಲವೆ! ಏಳಿರಿ, ದೀರ್ಘ ನಿದ್ರೆ ಕಳೆದು ಹಗಲು ಒರುತ್ತಿದೆ. ಅಲೆ ಎದ್ದಿದೆ. ಅದರ ರಭಸವನ್ನು ತಡೆಯಲಿಕ್ಕೆ ಯಾವು ದಕ್ಕೂ ಶಕ್ತಿ ಸಾಲದು. ಉತ್ಸಾಹ! ಎನ್ನ ಹುಡುಗರಿರಾ, ಉತ್ಸಾಹ! ಪ್ರೇಮ! ಎನ್ನ ಮಕ್ಕಳಿರಾ! ಶ್ರದ್ಧೆ! ಎನ್ನ ಬಾಲಕರಾ! ಭಯಬೇಡಿ. ಭಯವೇ ಮಹಾ ಪಾಪ.

ನಿಮ್ಮೆಲ್ಲರಿಗೂ ನನ್ನ ಆಶೀರ್ವಾದಗಳು. ಅಲ್ಲಿ ನಮ್ಮ ಪಕ್ಷವನ್ನವಲಂಬಿಸಿ ಸಹಾಯ ಮಾಡಿದ ಉದಾರಮನಸ್ಕರಿಗೆ ನನ್ನ ಸಂತತ ಪ್ರೇಮವನ್ನೂ ಕೃತಜ್ಞತೆಯನ್ನೂ ವ್ಯಕ್ತಪಡಿಸುತ್ತೇನೆಂದು ಹೇಳು. ಆದರೆ ಕೆಲಸದಲ್ಲಿ ಮಾತ್ರ ಸಡಿಲಬಿಡಕೂಡದೆಂದು ಹೇಳು. ನಮ್ಮ ಆದರ್ಶವನ್ನು ಸಾರಿ ಪ್ರಚಾರಗೊಳಿಸಿರಿ. ಹೀಗೆಯೇ ಎಂಬ ಹಟಬೇಡ, ಯಾವುದಕ್ಕೂ ವಿರೋಧವಾಗಿ ಹೋಗಬೇಡ. ರಾಸಾಯನಿಕ ದ್ರವ್ಯಗಳನ್ನು ಒಟ್ಟಿಗ ಸೇರಿಸುವುದೀಗ ನಮ್ಮ ಕಾರ್ಯ. ಆ ಮಿಶ್ರವು ಹೇಗೆ ಎಂದು ಸ್ಫಟಿಕವಾಗಿ ಪರಿಣಮಿಸುವುದೋ ಅದು ಭಗವಂತನಿಗೆ ಗೊತ್ತು. ಎಲ್ಲಕ್ಕೂ ಮೇಲೆ ಈ ಅಲ್ಪವಾದ ಕಾರ್ಯಸಿದ್ಧಿಗಾಗಲಿ, ನಿನ್ನದಕ್ಕಾಗಲಿ ಹೆಮ್ಮೆ ಬೇಡ. ದೊಡ್ಡ ದೊಡ್ಡ ಕೆಲಸಗಳಾಗಬೇಕು. ಆಗಬೇಕಾಗಿರುವುದರ ಮುಂದೆ ಈಗ ಆಗಿರುವುದು ಅತ್ಯಲ್ಪ. ನಂಬಿಕೆ ಇಡು. ಮರಳಿ ಹೇಳುತ್ತೇನೆ ಸಂಬಿಕೆಯಿಡು. ದೈವಾಜ್ಞೆ ಹೊರಟಿದೆ, ಭಾರತವರ್ಷವು ಉನ್ನತಿಗೆ ಬರಬೇಕೆಂದೂ ಜನಸಾಮಾನ್ಯರೂ ಬಡವರೂ ಸುಖಿಗಳಾಗಬೇಕೆಂದೂ. ಸಂತಸಗೊಳ್ಳು. ಆಧ್ಯಾತ್ಮಿಕ ಪ್ರವಾಹವು ಹೊರಟಿದೆ. ಅದು ತಡೆಯಿಲ್ಲದೆ ಮೇರೆಯಿಲ್ಲದೆ ಸಕಲವನ್ನೂ ನುಂಗುತ ಹರಿಯುತಲಿರುವುದು ನನ್ನ ದೃಷ್ಟಿಗೆ ಗೋಚರವಾಗುತ್ತಿದೆ. ಪ್ರತಿಯೊಬ್ಬನೂ ಮುಂದಾಳಾಗಿ ಓಡಿಬರುವನು. ಅದರ ವೇಗದೊಡನೆ ಒಳ್ಳೆಯುದೆಲ್ಲವೂ ಕಲೆತು ಪ್ರವಾಹದ ವೇಗವು ಬೆಳೆಯುವುದು. ಎಲ್ಲಾ ಭಗವಂತನ ಮಹಿಮೆ.

ನನಗಾವ ಸಹಾಯವೂ ಬೇಡ. ಸ್ವಲ್ಪ ದುಡ್ಡು ಕೂಡುಹಾಕಿ ಕೆಲವು ಮಾಯಾದೀಪಗಳನ್ನೂ ಪಟಗಳನ್ನೂ, ಕೃತಕಗೋಳಗಳನ್ನೂ ರಾಸಾಯನಿಕ ದ್ರವ್ಯಗಳನ್ನೂ ಕೊಂಡುಕೊಳ್ಳಿರಿ. ಪ್ರತಿ ಸಾಯಂಕಾಲವೂ ಬಡವರ ದೀನರ ಇನ್ನೂ ಹೊಲೆಯರ ಗುಂಪನ್ನು ಸೇರಿಸಿ, ಅವರಿಗೆ ಮೊದಲು ಧರ್ಮವಿಷಯವಾಗಿ ಮಾತನಾಡಿ, ತರುವಾಯ ಮಾಯಾದೀಪ ಮತ್ತು ಇತರ ಸಲಕರಣೆಗಳ ಮೂಲಕ ಜ್ಯೋತಿಶ್ಶಾಸ್ತ್ರ ಭೂಗೋಳ ಮುಂತಾದ ವಿಷಯಗಳನ್ನು ಅವರು ಮಾತನಾಡುವ ಭಾಷೆಯಲ್ಲಿಯೇ ಹೇಳಿರಿ. ಉತ್ಸಾಹ ಪೂರಿತರಾದ ಬೆಂಕಿಯ ಚೂರಿನಂತಹ ಕೆಲವು ಯುವಕರಿಗೆ ಶಿಕ್ಷೆಕೊಡಿರಿ. ನಿಮ್ಮ ಉತ್ಸಾಹವನ್ನು ಅವ

ರಿಗೆ ಹೊಯ್ದು ಕ್ರಮೇಣ ಸಂಸ್ಥೆಯನ್ನು ದೊಡ್ಡದು ಮಾಡಿ ವಿಸ್ತರಿಸಿರಿ. ನಿಮ್ಮ ಕೈಲಾದುದನ್ನು ಈಗಲೇ ಮಾಡಿರಿ. ಹೊಳೆ ದಾಟಲು ಅದು ತೀರ ಇಳಿಯುವವರೆಗೂ ಕಾಯಬೇಡಿರಿ. 'ವರ್ತಮಾನಪತ್ರಿಕೆ ಮುಂತಾದುವುಗಳ ಮುದ್ರಣವೇನೋ ಒಳ್ಳೆಯದು. ಆದರೆ ನಿತ್ಯ ಲೇಖನ ನಿತ್ಯ ಕಥನ ಇವುಗಳಿಗಿಂತ ಕೆಲಸ ಮೇಲಲ್ಲವೆ........ಸ್ಥಳದಲ್ಲಿ ಒಂದು ಸಭೆ ಸೇರಿಸಿ, ಸ್ವಲ್ಪ ಹಣವನ್ನು ಸಂಗ್ರಹಿಸಿ ನಾನು ಈಗತಾನೇ ಹೇಳಿದ ಸಾಮಾನುಗಳನ್ನು ಕೊಂಡುಕೊಂಡು, ಒಂದು ಗುಡಿಸಲನ್ನು ಬಾಡಿಗೆಗೆ ತೆಗೆದುಕೊಂಡು ಕಾರ್ಯವನ್ನು ಮೊದಲು ಮಾಡು. ಮೊದಲು ಕೆಲಸ, ಎರಡನೆಯದು ಪತ್ರಿಕೆ. ಜನಸಾಮಾನ್ಯದ ಮೇಲೆ ನಿಮ್ಮ ಪ್ರಭಾವವನ್ನು ವಿಸ್ತರಿಸಿ, ಅವರನ್ನು ನಿಮ್ಮ ವಶಮಾಡಿಕೊಳ್ಳಿರಿ. ಸಣ್ಣದು ಮೊದಲು ದೊಡ್ಡದು ಆಮೇಲೆ. ಸಣ್ಣದು ಮೊದಲೆಂದು ಧೈರ್ಯಗೆಡಬೇಡ. ಎದೆಗೊಳ್ಳು, ನೀನು ಮುಂದಾಳಾಗಿ ನಿನ್ನೊಡಹುಟ್ಟಿದವರನ್ನು ಮೂಗುದಾರ ಹಾಕಿ ಎಳೆಯಬೇಡ. ಅವರಸೇವೆಮಾಡು, ಅವರ ಸೇವಕನಾಗು. ಎಲ್ಲರಿಗೂ ಮುಂದಾಗಿರಬೇಕೆಂಬ ಹುಚ್ಚು ಎಂತೆಂತಹ ದೊಡ್ಡ ಹಡಗುಗಳನ್ನು ಈ ಜೀವಸಾಗರದಲ್ಲಿ ಮುಳುಗಿಸಿ ಬಿಟ್ಟಿದೆಯೋ! ಇದರ ವಿಷಯದಲ್ಲಿ ಮಾತ್ರ ಬಲುಜೋಕೆ. ಪ್ರಾಣಹೋದರೂ ಸರಿಯೇ ಸ್ವಾರ್ಥತ್ಯಾಗಿಯಾಗಿರು, ಕೆಲಸ ಮಾಡು. ನಾನು ಹೇಳಬೇಕಾದುದನ್ನೆಲ್ಲಾ ಬರೆಯಲಿಕ್ಕಾಗದಿಲ್ಲಿ. ಆದರೆ ಈಶ್ವರನು ನಿಮಗೆ ತಿಳಿವಳಿಕೆಯನ್ನು ದಯಪಾಲಿಸುವನು. ಎನ್ನ ವೀರ ಬಾಲಕರಿರಾ! ಕೆಲಸಕ್ಕೆ ಕೈಹಾಕಿರಿ. ಸಕಲವೂ ದೇವರ ಮಹಿಮೆ.

ನಿಮ್ಮ ಪ್ರಿಯ,
ವಿವೇಕಾನಂದ.

ಷಿಕಾಗೋ,
೨೩ನೇ ಜೂನ್, ೧೮೯೪.

ಮಹಾರಾಜರೇ,

ಶ್ರೀಮನ್ನಾರಾಯಣನು ತಮಗೂ ತಮ್ಮ ಪರಿವಾರಕ್ಕೂ ಕಲ್ಯಾಣವನ್ನೆಸಗಲಿ. ತಮ್ಮ ಅನುಗ್ರಹ ಪೂರ್ವಕವಾದ ಸಹಾಯದಿಂದ ಈ ದೂರದೇಶ ಬರಲು ಸಾಧ್ಯವಾಯಿತೆನಗೆ. ಇಲ್ಲಿಗೆ ಬಂದೀಚೆಗೆ ಇಲ್ಲಿಯ

ಜನರು ನನ್ನನ್ನು ಚೆನ್ನಾಗಿ ತಿಳಿದವರಾಗಿದ್ದಾರೆ. ಈ ದೇಶದ ಅತಿಥಿ ಸತ್ಕಾರಪರರು ನನ್ನ ಸಕಲ ಕೊರತೆಗಳನ್ನೂ ಪೂರ್ಣಮಾಡಿದ್ದಾರೆ. ಅನೇಕ ವಿಷಯಗಳಲ್ಲಿ ಆಶ್ಚರ್ಯವಾದುದೀದೇಶ. ಇಲ್ಲಿರುವರೊಂದದ್ಭುತಜಾತಿ. ಇಲ್ಲಿ ನಿತ್ಯವೂ ನಡೆಯಬೇಕಾದ ಕಾರ್ಯಗಳಲ್ಲಿ ಈ ಜಾತಿಯವರು ಉಪಯೋಗಿಸುವಷ್ಟು ಯಂತ್ರಗಳನ್ನು ಇನ್ನಾವ ಜಾತಿಯೂ ಉಪಯೋಗಿಸದು. ಎಲ್ಲವೂ ಯಂತ್ರವೇ. ಇನ್ನೊಂದೇನೆಂದರೆ, ಈ ಜಗತ್ತಿನ ಒಟ್ಟು ಪ್ರಜಾಸಂಖ್ಯೆಯಲ್ಲಿ ಇವರು ಇಪ್ಪತ್ತರಲ್ಲೊಂದು ಭಾಗ ಮಾತ್ರವಾದರೂ, ಇವರ ಸಂಪತ್ತು ಪ್ರಪಂಚದ ಸಮಗ್ರ ಸಂಪತ್ತಿನಲ್ಲಿ ಆರರಲ್ಲೊಂದು ಭಾಗ. ಇಷ್ಟಾದರೂ ಎಲ್ಲವೂ ಬಹುಪ್ರಿಯ. ಇಲ್ಲಿಯ ಕರ್ಮಕಾರರ ಕೂಲಿ ಜಗತ್ತಿನಲ್ಲೆಲ್ಲಾ ಹೆಚ್ಚು. ಆದರೂ ಬಂಡವಾಳಕ್ಕೂ ಕೂಲಿಗೂ ನಿತ್ಯ ವ್ಯಾಜ್ಯ.

ಅಮೆರಿಕದ ಸ್ತ್ರೀಯರಿಗಿರುವಷ್ಟು ಅಧಿಕಾರವು ಬೇರೆಲ್ಲಿಯೂ ಇಲ್ಲ. ಅವರು ಪ್ರತಿಯೊಂದನ್ನೂ ಕ್ರಮವಾಗಿ ಮೆಲ್ಲನೆ ತಮ್ಮ ವಶಮಾಡಿಕೊಳ್ಳುತ್ತಿದ್ದಾರೆ. ಇನ್ನೊಂದಾಶ್ಚರ್ಯವೇನೆಂದರೆ, ಇಲ್ಲಿ ಶಿಕ್ಷಿತರಾದ ಸ್ತ್ರೀಯರ ಸಂಖ್ಯೆ ಶಿಕ್ಷಿತರಾದ ಪುರುಷರ ಸಂಖ್ಯೆಗಿಂತ ಹೆಚ್ಚು. ಆದರೆ ಉಚ್ಚ ಪ್ರತಿಭಾಶಾಲಿಗಳು ಬಹುಮಟ್ಟಿಗೆ ಪುರುಷರೆಂಬುದೇನೋ ನಿಶ್ಚಯ. ಪಾಶ್ಚಾತ್ಯರು ನಮ್ಮ ಜಾತಿಭೇದದ ವಿಷಯವಾಗಿ ದೋಷಾರೋಪಣೆ ಮಾಡುವುದು ಹಾಗಿರಲಿ. ನಮ್ಮ ಜಾತಿಭೇದಗಳಿಗಿಂತಲೂ ನೀಚವಾದೊಂದು ಜಾತಿಭೇದವಿರುವುದವರಲ್ಲಿ. ಅದೇನೆಂದರೆ ಹೊನ್ನಿನಜಾತಿ. ಶಕ್ತಿತುಂಬಿದ ಡಾಲರ್ (ಅಮೆರಿಕನಾಣ್ಯ) ಸಕಲವನ್ನೂ ಮಾಡಬಲ್ಲುದೆಂಬುದು ಅಮೆರಿಕನರ ಮಾತು.

ಈ ದೇಶದಲ್ಲಿರುವಷ್ಟು ಕಾನೂನುಗಳು ಮತ್ತೆಲ್ಲಿಯೂ ಇಲ್ಲ. ಅವಕ್ಕೆ ಇಲ್ಲಿರುವಷ್ಟು ಅಸಡ್ಡೆ ಇನ್ನೆಲ್ಲಿಯೂ ಇಲ್ಲ. ಒಟ್ಟಿನಲ್ಲಿ ನಮ್ಮ ಹಿಂದೂಗಳು ಪಾಶ್ಚಾತ್ಯರಿಗಿಂತ ಅಧಿಕ ನೀತಿಪರಾಯಣರು. ಮಿಥ್ಯಾಚಾರ ಅಲ್ಲವೇ ಮತಾಭಿಮಾನ—ಇದೇ ಅವರ ಧರ್ಮ. ಇಲ್ಲಿಯ ಚಿಂತಾಶೀಲರಿಗೆ ತಮ್ಮ ಮೂಢಧರ್ಮದ ವಿಷಯದಲ್ಲಿ ಅಸಹ್ಯ ಹುಟ್ಟಿ ನವಜ್ಯೋತಿಯು ಭಾರತವರ್ಷದಿಂದ ಬರುವುದೆಂದು ಕಾದಿದ್ದಾರೆ ಅವರು

ಆಧುನಿಕ ವಿಜ್ಞಾನದ ನಜ್ಜುಗುಜ್ಜುಮಾಡುವಂತಹ ಭಯಂಕರವಾದ ಬಡಿತಕ್ಕೆ ಹೆದರದೆ, ಅದನ್ನು ಲೆಕ್ಕಿಸದೆ, ಸ್ವಲ್ಪವೂ ಕದಲದಂತಹ ನಮ್ಮ ಪವಿತ್ರವಾದ ವೇದಗಳ ಚಿಂತಾರಾಶಿಯು ಎಲ್ಲೋ ಒಂದು ಅಲ್ಪಾಂಶವನ್ನು ಕೂಡ ಎಷ್ಟು ವಿಶ್ವಾಸಪೂರ್ವಕವಾಗಿ ಗ್ರಹಿಸುತ್ತಾರೆಂಬುದನ್ನು ತಾವು ನೋಡಿದಲ್ಲದೆ ತಿಳಿಯಲಾಗದು. ಶೂನ್ಯದಿಂದ ಸೃಷ್ಟಿ, ಸೃಷ್ಟ ಪದಾರ್ಥ ಆತ್ಮ, ಸ್ವರ್ಗವೆಂಬ ಹೆಸರುಳ್ಳ ಸ್ಥಳದಲ್ಲಿ ಸಿಂಹಾಸನಾರೂಢನಾಗಿರುವ ಯಾವನೋ ಕ್ರೂರನೂ ಅತ್ಯಾಚಾರನೂ ಆದ ಈಶ್ವರ, ನಿತ್ಯ ನರಕಯಾತನೆ— ಇಂತಹ ಮತಗಳಲ್ಲಿ ಶಿಕ್ಷಿತರಾದವರಿಗೆಲ್ಲಾ ಅಸಹ್ಯ. ಸೃಷ್ಟಿಯು ಅನಾದಿತ್ವ, ಅದರಂತೆ ಆತ್ಮದ ನಿತ್ಯತ್ವ. ಇನ್ನೂ ನಮ್ಮಾತ್ಮನಲ್ಲಿ ಅವಸ್ಥಿತವಾದ ಪರಮಾತ್ಮ—ಈ ಸಂಬಂಧವಾದ ವೇದಗಳ ಉಪದೇಶವನ್ನು ಒಂದು ರೂಪವಾಗಿ ಅಲ್ಲವೆ ಮತ್ತೊಂದು ರೂಪವಾಗಿ ಗ್ರಹಿಸುತ್ತಿದ್ದಾರೆ. ಇನ್ನೊಂದೈವತ್ತು ಸಂವತ್ಸರಗಳೊಳಗಾಗಿ ಜಗತ್ತಿನಲ್ಲಿ ಶಿಕ್ಷಿತರಾದವರೆಲ್ಲರಿಗೂ ಪವಿತ್ರವಾದ ವೇದಗಳಲ್ಲಿ ಹೇಳಿರುವಂತೆ ಸೃಷ್ಟಿ, ಆತ್ಮ, ಇವುಗಳ ನಿತ್ಯತ್ವದಲ್ಲಿಯೂ ಈಶ್ವರನೇ ಪ್ರಕೃತಿಯ ಸರ್ವೋಚ್ಚ ಪರಿಪೂರ್ಣತಾವಸ್ಥೆ ಎಂಬುದರಲ್ಲಿಯೂ ವಿಶ್ವಾಸ ಉಂಟಾಗುವುದು. ಈಗಾಗಲೇ ಇಲ್ಲಿ ಪಂಡಿತರಾದ ಪುರೋಹಿತರು ತಮ್ಮ ಬೈಬಲ್ಲಿಗೆ ಈ ಪ್ರಕಾರ ವ್ಯಾಖ್ಯಾನ ಮಾಡುತ್ತಲಿದ್ದಾರೆ. ನನ್ನ ಸಿದ್ಧಾಂತವೇನೆಂದರೆ, ಪಾಶ್ಚಾತ್ಯರಿಗೆ ಹೆಚ್ಚಾಗಿ ಧರ್ಮಶಿಕ್ಷಣೆ, ನಮಗೆ ಹೆಚ್ಚಾಗಿ ಐಹಿಕೋನ್ನತಿಯ ಶಿಕ್ಷಣೆ, ಇವೀಗ ಬೇಕಾದುದು.

ಭಾರತವರ್ಷದ ದೌರ್ಭಾಗ್ಯಕ್ಕೂ ಅರಿಷ್ಟಕ್ಕೂ ಅಲ್ಲಿಯ ಬಡವರ ಅವಸ್ಥೆಯೇ ಮೂಲಕಾರಣ. ಪಾಶ್ಚಾತ್ಯರಲ್ಲಿ ಬಡವರು ಪಿಶಾಚಗಳಂತೆ. ಭಾರತವರ್ಷದ ಬಡವರು ಅವರಿಗೆ ಸಾಟಿಯಲ್ಲ. ಅವರ ಮುಂದೆ ನಮ್ಮವರು ದೇವತೆಗಳು. ಆದುದರಿಂದಲೇ ನಮ್ಮ ಬಡವರನ್ನು ಮೇಲಕ್ಕೆತ್ತುವ ಕಾರ್ಯವು ಸುಲಭಸಾಧ್ಯ ಬಡವರಿಗೆ ವಿದ್ಯೆಗಲಿಸಿ ಅವರನ್ನು ಮಾನವರನ್ನಾಗಿ ಮಾಡಬೇಕಾದುದೇ ನಮ್ಮ ಮುಖ್ಯ ಕರ್ತವ್ಯ. ನಮ್ಮ ಹಿಂದೂ ರಾಜರಿಗೂ ಅವರ ಪ್ರಜೆಗಳಿಗೂ ಪರಸ್ಪರ ಕೆಲಸವೇ ಇದು. ಆದರೂ ಇದುವರೆಗೆ ಈ ವಿಷಯದಲ್ಲಿ ಯಾವ ಪ್ರಯ

ತ್ನವೂ ನಡೆದಿಲ್ಲ- ಉತ್ತಮರ ಅಧಿಕಾರವು ಇತರ ಕಾರಣಗಳೊಡನೆ ಕಲೆತು ಭಾರತವರ್ಷದ ಜನಗಳನ್ನು ಅನೇಕ ಶತಮಾನಗಳಿಂದಲೂ ಮರ್ದನಮಾಡಿ, ಕೊನೆಗೆ ಅವರು ತಮ್ಮ ಮಾನವತ್ವವನ್ನೇ ಮರೆಯುವಂತೆ ಮಾಡಿರುವುದು. ಆದುದರಿಂದಲೇ ಅವರಲ್ಲಿ ಚಿಂತಾಶಕ್ತಿಯನ್ನುಂಟು ಮಾಡಿ, ಅವರು ತಮ್ಮ ಸುತ್ತಲೂ ನಡೆಯುವುದನ್ನು ಕಣ್ದೆರೆದು ನೋಡು ವಂತೆ ಮಾಡಿಸುವುದೇ ನಮ್ಮ ಕರ್ತವ್ಯ. ನಾವಿಷ್ಟು ಕೆಲಸಮಾಡಿ ದರೆ ಸಾಕು. ಮುಂದೆ ಅವರವರ ವಿಮೋಚನ ಮಾರ್ಗವನ್ನು ಅವರ ವರೇ ಹುಡುಕುವರು. ಪ್ರತಿಯೊಬ್ಬನೂ ಪುರುಷನಾಗಲಿ ಸ್ತ್ರೀಯಾ ಗಲಿ ಅವನವನ ವಿಮೋಚನಕ್ಕೆ ಅವನವನೇ ಬಾಧ್ಯನು. ಅವನವನ ವಿಮೋಚನವು ಅವನವನ ಕೈಯಲ್ಲಿರುವುದು. ಮುಖ್ಯವಾಗಿ ಬೇಕಾ ದುದು ಚಿಂತಾಶಕ್ತಿ. ಇದೊಂದಿದ್ದಲ್ಲಿ ಉಳಿದುದೆಲ್ಲಾ ಇದರ ಫಲದಂತೆ ಪ್ರಾಪ್ತವಾಗುವುದು. ಸಾಮಗ್ರಿಗಳನ್ನು ಒದಗಿಸಿಕೊಡುವುದು ನಮ್ಮ ಕೆಲಸ, ಉಳಿದುದು ಪ್ರಕೃತಿ ನಿಯಮದ ಕೆಲಸ. ಇದೀಗ ನನ್ನ ಮನ ಸ್ಸಿನಲ್ಲಿದ್ದುದು ಬಹುಕಾಲದಿಂದ. ಈ ಕಾರ್ಯವನ್ನು ನಾನು ನನ್ನ ಜನ್ಮ ಭೂಮಿಯಲ್ಲಿ ನೆರವೇರಿಸಲಾಗದೇ ಹೋದುದರಿಂದಲೇ ನಾನು ಬಂದುದಿ ಲ್ಲಿಗೆ ದೇಶಭ್ರಷ್ಟನಾಗಿ. ಆದರೆ ದರಿದ್ರರಿಗೆ ವಿದ್ಯಾಭ್ಯಾಸ ಮಾಡಿಸುವ ಕಾರ್ಯಕ್ಕೆ ವಿಘ್ನವಿದೀಗ. ತಾವು ಪ್ರತಿಯೊಂದು ಗ್ರಾಮದಲ್ಲಿಯೂ ಧರ್ಮಪಾಠಶಾಲೆಗಳನ್ನಿಡಿಸಿದರೂ ನಮ್ಮ ಉದ್ದೇಶ ನೆರವೇರದು. ಯಾ ಕನ್ನುವಿರೋ! ಬಡವರ ಮಕ್ಕಳು ತಮ್ಮ ತಾಯಿತಂದೆಗಳಿಗೆ ಒತ್ತಾಸೆ ಯಾಗಿ ಹೊಲದಲ್ಲಿ ಕೆಲಸಮಾಡುವರೇ ವಿನಾ ಓನಾಮ ಕಲಿಯುವುದ ಕ್ಕಾಗಿ ಪಾಠಶಾಲೆಗೆ ಹೋಗರು. ಆದುದರಿಂದ ವಿದ್ಯೆಯು ಎಡೆಗೆ ಬಡ ವನು ಬಾರದಿದ್ದರೆ ಬಡವನಿರುವೆಡೆಗೆ ವಿದ್ಯೆಯೇ ಹೋಗಬೇಕು. ನಮ್ಮ ಭಾರತ ವರ್ಷದಲ್ಲಿ ಏಕಚಿತ್ತರಾಗಿಯೂ, ಸ್ವಾರ್ಥತ್ಯಾಗಿಗಳಾಗಿಯೂ, ದೇಶಾಟನಪರರಾಗಿಯೂ, ಹೋದ ಕಡೆ ಧರ್ಮವಿಚಾರವನ್ನು ಮಾಡುತ ಕಾಲಕ್ಷೇಪ ಮಾಡುವಂತಹ ಸನ್ಯಾಸಿಗಳನೇಕರಿರುವರು. ಅವರಲ್ಲಿ ಕೆಲವರನ್ನು ಸೇರಿಸಿ, ಅವರು ತತ್ವಬೋಧೆಯೊಡನೆ ಲೌಕಿಕ ವಿಚಾರಗಳನ್ನು ಜನಗಳಿಗೆ ತಿಳಿಸುವವರಾದರೆ, ಆ ಸಾಧುಗಳು ಪ್ರತಿಯೊಂದು ಗ್ರಾಮ

ಕ್ಕೂ ಪ್ರತಿಯೊಂದು ಮನೆಗೂ ಹೋಗಿ, ವಿದ್ಯೆಯನ್ನು ಕಲಿಸಬಹುದು. ಉದಾಹಾರಣೆಗಾಗಿ ನಾನು ಹೇಳುವುದೇನೆಂದರೆ ಇಬ್ಬರು ಸಾಧುಗಳು ಒಂದು ಮಾಯಾದೀಪವನ್ನೂ (ಮ್ಯಾಜಿಕ್ ಲಾಂಟರ್ನ್) ಒಂದು ಕೃತಕ ಗೋಳವನ್ನೂ, ಕೆಲವು ಭೂಪಟಗಳನ್ನೂ ತೆಗೆದುಕೊಂಡು ಸಾಯಂಕಾಲ ಒಂದು ಗ್ರಾಮಕ್ಕೆ ಹೋಗಿ ಆ ಗ್ರಾಮದವರಿಗೆಲ್ಲಾ ಜ್ಯೋತಿಷಶಾಸ್ತ್ರ ವನ್ನೂ ಭೂಗೋಳಶಾಸ್ತ್ರವನ್ನೂ ಕಲಿಸಬೇಕು. ಪುಸ್ತಕ ಪಾಠದಿಂ ದುಂಟಾಗುವ ಜ್ಞಾನಕ್ಕಿಂತಲೂ ಕಣ್ಣಾರ ನೋಡುವುದರಿಂದ ಜನಿಸುವ ಜ್ಞಾನವು ಬಹಳ ಮೇಲು. ಇತರ ಜನಾಂಗಗಳ ಚರಿತೆಯನ್ನೂ ಅವರ ನಡೆನುಡಿ ಮರ್ಯಾದೆಗಳನ್ನೂ ಕಥಾರೂಪವಾಗಿ ಹೇಳುವುದರಿಂದ ಮೂಢ ರಿಗೆ ಹೆಚ್ಚು ತಿಳಿವಳಿಕೆಯುಂಟಾಗುವುದು. ಈ ಕಾರ್ಯಗಳಿಗೆಲ್ಲಾ ಏರ್ಪಾಟುಗಳಾಗಬೇಕು. ದುಡ್ಡಿಲ್ಲದೆ ಏರ್ಪಾಟುಗಳಾಗವು. ದುಡ್ಡು ದೊರಕುವುದು ದುರ್ಲಭ. ಭಾರತ ಭೂಮಿಯಲ್ಲಿ ಜನಗಳಿದ್ದಾರೆ. ಆದರೆ ಅಯ್ಯೋ! ಧನವಿಲ್ಲ. ನಮ್ಮ ಜನ್ಮಭೂಮಿಯಲ್ಲಿ ಈ ಸತ್ಕಾರ್ಯ ಕ್ಕೆ ಧನಿಕರಿಂದ ದ್ರವ್ಯವು ದೊರಕದೇ ಹೋದುದರಿಂದಲೇ ತಮ್ಮ ಸಾಹಾ ಯ್ಯದಿಂದ ನಾನು ಬಂದುದಿಲ್ಲಿಗೆ. ಅಮೆರಿಕಾ ದೇಶದವರಿಗೆ ಭಾರತೀ ಯರು ಬದುಕಿದರೇನು? ಸತ್ತರೇನು? ನಮ್ಮವರೇ ಸ್ವಾರ್ಥಪರರಾಗಿರಲು ಅನ್ಯರಿಗೇನು?

ಎಲೈ ಮಹಾ ಧೊರೆಯೇ? ಈ ಪ್ರಾಣವೆಂಬುದು ಅಲ್ಪಪ್ರಮಾಣ ವುಳ್ಳುದು. ಈ ಪ್ರಾಪಂಚಿಕ ಅಭಿಮಾನಗಳೆಲ್ಲಾ ಕ್ಷಣಿಕವಾದುವು. ಪರರ ಹಿತಕ್ಕಾಗಿ ಯಾವನು ಬದುಕುವನೋ ಅವನೇ ಜೀವಂತನು, ಉಳಿದವರು ಜೀವಚ್ಛವಗಳು. ಭೂಗತವಾಗಿರುವ ಭಾರತ ವರ್ಷವನ್ನು ಮೇಲಕ್ಕೆತ್ತಿ ನಿಲ್ಲಿಸುವ ಕಾರ್ಯದಲ್ಲಿ ತಮ್ಮಂತಹ ಉದಾರ ಮನಸ್ಸುಳ್ಳ ಮಹಾರಾಜ ರೊಬ್ಬರು ಎಷ್ಟೋ ಸಾಹಾಯ್ಯಮಾಡಿ ದೀರ್ಘಕಾಲ ತನ್ನನ್ನು ಜನರು ಸ್ಮರಿಸಿ ಕೊಂಡಾಡುವಂತೆ ಕೀರ್ತಿಯನ್ನು ಪಡೆಯಬಹುದು.

ಅಜ್ಞಾನವೆಂಬ ಸಾಗರದಲ್ಲಿ ಮುಳುಗಿ ನರಳುವ ಜನರಲ್ಲಿ ತಮಗೆ ಅತ್ಯಂತನುತಾಪವು ಹುಟ್ಟುವಂತೆ ಮಹಾದೇವನು ಕೃಪೆಗೈಯಲೆಂಬುದೀಗ ನನ್ನ ಪ್ರಾರ್ಥನೆ.

ವಿವೇಕಾನಂದ.

ಅಮೆರಿಕಾ,

೨೯ನೆಯ ಸೆಪ್ಟಂಬರ್, ೧೮೯೪,

ಪ್ರಿಯ................,

ಬಹಳ ಚೆನ್ನಾಗಿ ಮಾಡಿದ್ದೀರಿ ನೀವೆಲ್ಲರೂ........ಎನ್ನ ಕೆಚ್ಚೆದೆಯ ಮಕ್ಕಳಿರಾ! ನಿಮ್ಮಿಂದ ನನಗೆ ಹೆಮ್ಮೆ...........................ಆಶೆಯಿಡಿರಿ ನಿರಾಶರಾಗದಿರಿ. ಪ್ರಾರಂಭವು ಇಂತಹದಾಗಿರಲು, ನೀನು ನಿರಾಶನಾಗುವೆಯಾದರೆ ನೀನು ಹುಚ್ಚ.

ನಮ್ಮ ಕಾರ್ಯಕ್ಷೇತ್ರವಾದರೆ ಇಂಡಿಯ. ಪರದೇಶಿಯರ ಮೆಚ್ಚಿನ ಉಪಯೋಗವೆಲ್ಲಿ ಎಂದರೆ ಭಾರತವರ್ಷವನ್ನು ಜಾಗ್ರತಿಗೊಳಿಸುವುದರಲ್ಲಿ........ಅಷ್ಟೆ. ನಮ್ಮ ಕಾರ್ಯವಿಸ್ತಾರಕ್ಕೆ ನಮಗೊಂದು ಗಟ್ಟಿಯಾದ ನೆಲೆ ಆವಶ್ಯಕ............ಕ್ಷಣಮಾತ್ರವಾದರೂ ಕದಲದಿರು; ಸರಿಯಾಗಿ ಬರುವುದೆಲ್ಲವೂ. ಪ್ರಪಂಚವನ್ನು ಮುಂದಿರಿಸುವುದಾವುದೆಂದರೆ ಸಂಕಲ್ಪಶಕ್ತಿ. ಎನ್ನ ವತ್ಸ! ಯುವಕರು ಕೆಲವರು ಕಿರಸ್ತಾನರಾದರೆ ದುಃಖ ಬೇಡ ನಿನಗೆ. ಈಗಣ ಸಮಾಜದ ಕಟ್ಟುಗಳ ತೊಡಕಿನಲ್ಲಿ (ಮುಖ್ಯವಾಗಿ ಮದ್ರಾಸಿನಲ್ಲಿ) ಅವರಿನ್ನೇನುತಾನೇ ಆಗಬಲ್ಲರು! ಉನ್ನತಿಗೆ ಸ್ವಾತಂತ್ರ್ಯವೀಗ ಪ್ರಥಮಾವಸ್ಥೆ. ನಿಮ್ಮ ಹಿಂದಣ ಹಿರಿಯರು ಆತ್ಮನಿಗೆ ಸಕಲ ಸ್ವಾತಂತ್ರ್ಯವನ್ನೂ ಕೊಟ್ಟುದರಿಂದಲೇ ಧರ್ಮವು ಬೆಳೆಯಿತು ನ್ನತಿಗೆ. ಶರೀರಕ್ಕೆ ಕಟ್ಟುಗಳನ್ನು ಹಾಕಿ ಬಿಗಿದುದರಿಂದ ಸಮಾಜವು ಬೆಳೆಯಲಿಲ್ಲ. ಪಾಶ್ಚಾತ್ಯರಲ್ಲಿ ಇದಕ್ಕೆ ಪ್ರತಿ. ಸರ್ವ ಸ್ವಾತಂತ್ರ್ಯವೂ ಸಮಾಜಕ್ಕೆ, ಸೊನ್ನೆ ಧರ್ಮಕ್ಕೆ. ಈಗತಾನೆ ಪೌರ್ವಾತ್ಯ ಸಮಾಜದ ಕಾಲುಗಳ ಸಂಕೋಲೆಗಳೂ ಪಾಶ್ಚಾತ್ಯ ಧರ್ಮದಡಿಗಳ ಬೇಡಿಗಳೂ ಕಳಚಿ ಬೀಳುತ್ತಲಿವೆ.

ಮರಳಿ ಅದರದರ ಬಗೆಯನ್ನೇ ಅದದು ಅನುಸರಿಸುವುದು. ಭಾರತ ಸಮಾಜದ ರೀತಿ ಧಾರ್ಮಿಕವು, ಅಥವಾ ಒಳಗಣ ಕಣ್ಣುಳ್ಳುದು. ಪಾಶ್ಚಾತ್ಯ ಸಮಾಜದ ರೀತಿ ವೈಜ್ಞಾನಿಕವು, ಹೊರಗಣ ಕಣ್ಣುಳ್ಳುದು. ಪಾಶ್ಚಾತ್ಯರಿಗೆ ಸಾಮಾಜಿಕ ಸುಧಾರಣೆಯು ಮೂಲಕ ಆಧ್ಯಾತ್ಮಿಕೋನ್ನತಿ; ಪೌರ್ವಾತ್ಯರಿಗೆ ಆಧ್ಯಾತ್ಮಿಕತೆಯು ಮೂಲಕ ಸಾಮಾಜಿಕ ಸುಧಾರಣೆ. ಇದರಿಂದಲೇ ಭಾರತ ವರ್ಷದ ಆಧುನಿಕ ಸುಧಾರಕರು ಭಾರತ ವರ್ಷದ ಧರ್ಮವನ್ನು ಕೆಡಹಿದ ಹೊರತು ಸಾಮಾಜಿಕ ಸುಧಾರಣೆಗೆ ಮಾರ್ಗವಿಲ್ಲವೆಂದು ಬಗೆದರು. ಆದರೆ ಅವರ ಪ್ರಯತ್ನವು ಸಫಲವಾಯಿತೇನು? ಇಲ್ಲ. ಅದೇಕೆ! ತಮ್ಮ ಧರ್ಮವೇನೆಂಬುದನ್ನೇ ಅರಿಯದಿದ್ದವರವರು. ಸಕಲ ಧರ್ಮಗಳಿಗೂ ತಾಯಿಯಾದ ಧರ್ಮದಲ್ಲಿ ಶಿಕ್ಷೆಯನ್ನು ಅವರಾರೂ ಹೊಂದಿರಲಿಲ್ಲ. ನಮ್ಮ ಮತವೇನೆಂದರೆ, ಹಿಂದೂ ಸಾಮಾಜಿಕ ಸುಧಾರಣೆಯು ಧರ್ಮನಾಶದಿಂದಾಗತಕ್ಕದ್ದಲ್ಲ ಈಗಣ ಸಮಾಜದ ಅವಸ್ಥೆಗೆ ಧರ್ಮವು ಕಾರಣವಲ್ಲ; ಧರ್ಮವು ಸಮಾಜಕ್ಕೆ ಹೇಗೆ ಅನ್ವಯಿಸಬೇಕೋ ಹಾಗಾಗದಿದ್ದುದೇ ಕಾರಣ. ನಾನು ಈಗ ಹೇಳಿದ ಪ್ರತಿಯೊಂದು ಸಂಗತಿಯನ್ನೂ ನಮ್ಮ ಪ್ರಾಚೀನ ಗ್ರಂಥಗಳ ಪ್ರಮಾಣ ಪೂರ್ವಕ ಪ್ರತಿಪಾದಿಸಲು ಸಿದ್ಧನು. ಇದೀಗ ನನ್ನುಪದೇಶ. ಇದನ್ನು ಆಚರಣೆಗೆ ತರುವುದಕ್ಕಾಗಿ ನಾವು ಹೋರಾಡಬೇಕು ಯಾವಜ್ಜೀವವೂ. ಆದರೆ ಅದನ್ನರಿಯಲು ದೀರ್ಘಕಾಲ ಹಿಡಿಯುವುದು. ತಾಳ್ಮೆಯಿಂದ ಕಾರ್ಯ ನಡೆಯಿಸು. "ಉದ್ಧರೇದಾತ್ಮನಾತ್ಮಾನಂ" (ತನ್ನಿಂದ ತಾನೇ ಉದ್ಧಾರವಾಗಬೇಕು.)

ನಿನ್ನ ವಿವೇಕಾನಂದ.

ತಾ. ಕ. ಈಗಣ ಹಿಂದೂ ಸಮಾಜವು ಅಧ್ಯಾತ್ಮನಿಷ್ಠರಿಗೆ ಮಾತ್ರವೇ ವ್ಯವಸ್ಥೆಯಾಗಿ, ಇತರರೆಲ್ಲರನ್ನು ನಿರಾಶರನ್ನಾಗಿ ಮಾಡಿ ಅರೆದು ತಿಕ್ಕುತ್ತಲಿದೆ. ಇದೇಕೆ! ಈ ಟೊಳ್ಳು ಪ್ರಪಂಚದ ಸುಖಗಳನ್ನು ಕೊಂಚ ಅನುಭವಿಸಬೇಕೆಂದು ಬಯಸುವವರ ಪಾಡೇನಾಗಬೇಕು? ನಮ್ಮ ಧರ್ಮವು ಹೇಗೆ ಸರ್ವಗ್ರಾಹಿಯೋ ಹಾಗೆಯೇ ನಮ್ಮ ಸಮಾಜವೂ ಇರತಕ್ಕದ್ದು. ಇದಾಗುವ ಬಗೆ ಹೇಗೆ? ನಮ್ಮ ಧರ್ಮದ ನಿಜವಾ

ತತ್ವಗಳನ್ನು ಮೊದಲು ತಿಳಿದು ತರುವಾಯ ಅವುಗಳನ್ನು ಸಮಾಜಕ್ಕೆ ಅನ್ವಯಿಸುವುದರಿಂದ. ಇದು ವಿಳಂಬವಾಗಿ ಸುನಿಶ್ಚಿತವಾಗಿ ಆಗತಕ್ಕ ಕೆಲಸ.

* * * *

ವಾಷಿಂಗ್‌ಟನ್,
೨೭ನೆಯ ಅಕ್ಟೋಬರ್, ೧೮೯೪.

ಪ್ರಿಯ ................,

ನಾನು ಇಂಡಿಯದಲ್ಲೇನು ಮಾಡುವೆನೋ ಅದನ್ನೇ ನಾನಿಲ್ಲಿಯೂ ಮಾಡುತ್ತಿರುವುದು, ಸರ್ವದಾ ಈಶ್ವರನಮೇಲೆ ಭಾರವನ್ನು ಹೊರಿಸಿ ಮುಂದೆ ಆಗಬೇಕಾದುದನ್ನು ಮನಸ್ಸಿಗೆ ತಾರದೆ. ನಾನೀದೇಶದಲ್ಲೆಡೆಬಿಡದೆ ಕಾರ್ಯಪರನಾಗಿರುವುದನ್ನೂ, ನನ್ನ ಅಭಿಪ್ರಾಯಗಳನ್ನು ಬರೆದು ಪುಸ್ತಕರೂಪವಾಗಿ ಪ್ರಕಾಶಪಡಿಸುವುದಕ್ಕೆ ನನಗೆ ವಿರಾಮವಿಲ್ಲದಿರುವುದನ್ನೂ ಜ್ಞಾಪಕದಲ್ಲಿಡಬೇಕು ನೀನು. ಈ ಎಡೆಬಿಡದ ದುಡಿತದಿಂದ ನನ್ನ ನರಗಳು ಸವೆದು ಸಪ್ಪೆಗಾಗಿದ್ದೇನೆ ನಾನು. ನೀನೂ ನನ್ನ ಮದ್ರಾಸು ಸ್ನೇಹಿತರೂ ಸ್ವಾರ್ಥತೆ ಲೇಶವೂ ಇಲ್ಲದೆ ಅತ್ಯಂತ ಶೌರ್ಯವಾದ ಕಾರ್ಯವನ್ನು ಎನಗೋಸ್ಕರ ಎಸಗಿದುದಕ್ಕಾಗಿ ನನ್ನ ಋಣವನ್ನು ಬಣ್ಣಿಸಲಾರೆನು ನಾನು. ಕಾರ್ಯ ದಕ್ಷತೆ ನನಗಿಲ್ಲ. ನನ್ನ ಪ್ರಕೃತಿಯಾದರೆ ವಿದ್ಯಾ ಧ್ಯಾನ ಇವುಗಳ ಮುಖವಾದುದು. ನಾನು ಸಾಕಾದಷ್ಟು ದುಡಿದಿರುವೆನೆಂಬುದು ನನ್ನ ಅಭಿಪ್ರಾಯ. ಈಗ ವಿಶ್ರಾಂತಿ ಹೊಂದಿ ನನ್ನ ಗುರುದೇವನು ನನ್ನ ಬಳಿ ಕಳುಹಿಸಿರುವವರಿಗೆ ಕೊಂಚ ಶಿಕ್ಷೆಯನ್ನು ಕೊಡಬೇಕೆಂಬುದೀಗ ನನ್ನ ಆಶೆ ನೀನೇನು ಮಾಡಬಲ್ಲೆನೆಂಬುದು ನಿನಗೀಗ ಗೊತ್ತು. ಏಕೆಂದರೆ, ಮದ್ರಾಸಿನ ಯುವಕರಿರಾ! ಆಗಿರುವುದೆಲ್ಲವೂ ನಿಮ್ಮದೇ. ಎಲ್ಲವೂ ನಿಮ್ಮಿಂದಲೇ! ನಾನೇನು ಹೆಸರು ಮಾತ್ರದವನು. ಬೈರಾಗಿ ನಾನು. ನನಗೆ ಬೇಕಾದುದೊಂದು ಮಾತ್ರ. ಗಂಡ ಸತ್ತ ಮುಂಡೆಯ ಕಣ್ಣೀರೊರಸದ ಅನಾಥನ ಬಾಯಿಗೆ ಒಂದು ತುತ್ತು ಅನ್ನವನ್ನು ಹಾಕದ ಧರ್ಮದಲ್ಲಾಗಲೀ ದೇವರಲ್ಲಾಗಲೀ ನನಗೆ ನಂಬಿಕೆಯಿಲ್ಲ. ಸಿದ್ಧಾಂತಗಳು ಬಹು ಉನ್ನತವಾಗಿರಬಹುದು. ತತ್ವಗಳೆಲ್ಲವೂ

ಬಲು ಚೆನ್ನಾಗಿ ಹೆಣದಿರಬಹುದು. ಪುಸ್ತಕರೂಪವಾಗಿಯೂ ಬರೀ ಮಾತಿನ ಸಿದ್ಧಾಂತವಾಗಿಯೂ ಇರುವ ಧರ್ಮ ಧರ್ಮವಲ್ಲ. ಕಣ್ಣೀರು ವುದೆಲ್ಲಿ ಎಂದರೆ ಹಣೆಯಲ್ಲಿ, ಬೆನ್ನಿನಲ್ಲಲ್ಲ. ಆದುದರಿಂದ ಮುಂದೆ ನೋಡಿರಿ. ನೀನು ಬಲು ಹೆಮ್ಮೆಯೊಡನೆ "ನನ್ನ ಧರ್ಮ" ಎಂದು ಕರೆಯುವೆಯಷ್ಟೆ! ಅದನ್ನು ಆಚರಣೆಯಲ್ಲಿ ತೋರಿಸು. ದೇವರು ನಿನ್ನನ್ನು ಹರಸಲಿ.

ನಿಮ್ಮ ದೃಷ್ಟಿ ನಿಮ್ಮ ಕಡೆಯೇ ಇರಲಿ; ನನ್ನ ಕಡೆ ಬೇಡ. ನಿಮ್ಮಲ್ಲಿ ಈಗ ತೋರಿಬರುವ ಉತ್ಸಾಹಕ್ಕೆ ನಾನೇನೋ ಕಾರಣನು, ಅದಕ್ಕೆ ನನಗೆ ಸಂತೋಷ. ಅದನ್ನು ಬಿಡದೆ ಹಿಡಿದು ಅದು ಹರಿಯುವ ಕಡೆ ತೇಲಿಕೊಂಡು ಹೋಗಿರಿ ಸರಿಬರುವುದೆಲ್ಲವೂ. ಪ್ರೇಮವೆಂದಿಗೂ ತಪ್ಪದಪ್ಪ ಎನ್ನ ವತ್ಸ! ಇಂದಿಲ್ಲದಿದ್ದರೆ ನಾಳೆ ಅಲ್ಲದಿದ್ದರೆ ಯುಗಗಳಿಗಾಚೆ ಸತ್ಯಕ್ಕೆ ಯಾವಾಗಲೂ ಜಯವು. ಪ್ರೇಮಕ್ಕೆ ಗೆಲುವು ನಿಶ್ಚಯ. ನಿಮ್ಮ ಸಜಾತೀಯರಲ್ಲಿ ನಿಮಗೆ ಪ್ರೇಮವುಂಟೆ? ದೇವರನ್ನು ಹುಡುಕಿಕೊಂಡು ಹೋಗುವುದೆಲ್ಲಿಗೆ? ದರಿದ್ರರೂ, ಕ್ಲೇಶಪೀಡಿತರೂ, ದುರ್ಬಲರೂ ದೇವರುಗಳಲ್ಲವೇನು? ಅವರನ್ನೇಕೆ ಪೂಜಿಸಬಾರದು ಮೊದಲು? ಗಂಗಾತೀರದಲ್ಲಿ ಬಾವಿ ತೋಡುವುದಕ್ಕೇಕೆ ಹೋಗಬೇಕು. ಪ್ರೇಮದ ಶಕ್ತಿಯಲ್ಲಿ ನಂಬಿಕೆಯಿಡು. ಊದಿದರೆ ಗುನ್ನಂಪಟ್ಟೆಯಂತೆ ಹಾರಿಹೋಗುವ ಹೆಸರಾರಿಗೆ ಬೇಕು? ವೃತ್ತಾಂತ ಪತ್ರಿಕೆಗಳು ನನ್ನ ವಿಷಯವಾಗಿ ಏನು ಹೇಳುತ್ತವೆಂಬುದನ್ನು ನಾನು ಗಮನಿಸೆನು. ನಿನಗೆ ಪ್ರೇಮವಿದೆಯೇನು? ಹಾಗಾದರೆ ನೀನು ಸರ್ವಶಕ್ತನು. ನೀನು ಸಂಪೂರ್ಣವಾಗಿ ಸ್ವಾರ್ಥಶೂನ್ಯನೇನು? ಹಾಗಿದ್ದಲ್ಲಿ ನಿನ್ನನ್ನಿದಿರಿಸಿ ತಡೆಯುವರಾರು? ಎಲ್ಲಿಯೂ ಗೌರವ ಕೊಡುವುದಾವುದೆಂದರೆ ಚರಿತ್ರ, ನಡತೆ. ಕಡಲ ಬುಡದಲ್ಲಿರುವ ತನ್ನ ಮಕ್ಕಳನ್ನು ದೇವರು ಸಲಹುವನಲ್ಲವೆ? ನಮ್ಮ ದೇಶದಲ್ಲಿ ಶೂರರು ಬೇಕು. ಆದುದರಿಂದ ಶೂರರಾಗಿರಿ ನೀವು.

ನಾನು ಇಂಡಿಯಕ್ಕೆ ಹಿಂದಿರುಗಿ ಬರಬೇಕೆಂಬುದು ಪ್ರತಿಯೊಬ್ಬನ ಆಶೆ. ನಾನಲ್ಲಿಗೆ ಬಂದರೆ ಈಗ ಮಾಡಿರುವುದಕ್ಕಿಂತ ಹೆಚ್ಚಾಗಿ ಕೆಲಸ ಮಾಡಲಾಗುವುದೆಂಬುದು ಅವರ ಅಭಿಪ್ರಾಯ. ಎನ್ನ ಸ್ನೇಹಿತನೇ!

ಅವರರಿಯರು. ಈಗ ಮೊಳೆತಿರುವ ಉತ್ಸಾಹವೇನು? ಅದೆಲ್ಲೋ? ಅಲ್ಪಸ್ವಲ್ಪ ದೇಶಾಭಿಮಾನ. ಅದರರ್ಥವೇನು? ಏನೂ ಇಲ್ಲ, ಬರೀ ಸೊನ್ನೆ. ಅದು ನಿಜವಾಗಿಯೂ ಅಪ್ಪಟವಾಗಿದ್ದಲ್ಲಿ ಅತ್ಯಲ್ಪಕಾಲದಲ್ಲಿಯೇ ವೀರರು ನೂರಾರು ಮಂದಿ ಮುಂದೆ ಬಂದು ಮುಂದರಿಸುವರು ಕಾರ್ಯವನ್ನು. ಆದುದರಿಂದ ನೀವೇ ಸಕಲವನ್ನೂ ಮಾಡಿರುವಿರೆಂದೆಣಿಸಿ ಮುಂದೆ ಸರಿಯಿರಿ. ನನ್ನನ್ನು ಬಿಟ್ಟುಬಿಡಿ ಇಲ್ಲಿ. ಮಹಾಕಾರ್ಯಕ್ಷೇತ್ರವಿದು. ಆ 'ಇಸಂ' ಈ 'ಇಸಂ' ಕಟ್ಟಿಕೊಂಡು ನನಗೇನು? ಈಶ್ವರನ ಕಿಂಕರನು ನಾನು. ಉನ್ನತಾಲೋಚನೆಗಳ ಪ್ರಚಾರಕ್ಕೆ ಇದಕ್ಕಿಂತಲೂ ಮೇಲಾದ ಕ್ಷೇತ್ರವಿರುವುದೆಲ್ಲಿ ಭೂಮಿಯ ಮೇಲೆ? ಇಲ್ಲಿ ನನ್ನ ಒಬ್ಬ ವೈರಿಗೆ ನೂರುಮಂದಿ ಸ್ನೇಹಿತರಿದ್ದಾರೆ. ಇಲ್ಲೇನೆಂದು ತಿಳಿದಿದ್ದೀಯೆ? ಪುರುಷರಲ್ಲಿ ಪರಸ್ಪರ ಮೈತ್ರಿ, ಸ್ತ್ರೀಯರಾದರೋ ದೇವತಾಸ್ವರೂಪರು. ಸ್ತೋತ್ರ ಮಾಡುತ್ತೇನೆಂದರೆ ಧಡ್ಡರೂ, ಬುದ್ಧಿಹೀನರೂ ಎದ್ದು ನಿಲ್ಲಬಹುದು. ಸರಿಯಾಗಿ ಎಲ್ಲವೂ ಆಗುವ ದೆಂದು ತಿಳಿದರೆ ಅಂಜುಕುಳಿಗಳು ಕೂಡ ಶೂರರಂತೆ ನಟಿಸಬಹುದು. ಆದರೆ ನಿಜವಾದ ಶೂರನು ಕಾರ್ಯಮಾಡುವನು ಸದ್ದಿಲ್ಲದೆ. ಬುದ್ಧನೋರ್ವನು ಪ್ರಕಾಶಕ್ಕೆ ಬರುವುದಕ್ಕೆ ಮೊದಲು ಸಾಯುವ ಬುದ್ಧರೆಷ್ಟುಮಂದಿ? ಎನ್ನ ಮಗನೆ! ದೇವರಲ್ಲಿ ನನಗೆ ವಿಶ್ವಾಸ, ಮನುಷ್ಯನಲ್ಲಿಯೂ ವಿಶ್ವಾಸ. ಕ್ಲೇಶಕ್ಕೀಡಾದವರಿಗೆ ಸಾಹಾಯ್ಯ ಮಾಡುವುದರಲ್ಲಿಯೂ ನನಗೆ ವಿಶ್ವಾಸ. ಇತರರನ್ನು ಕಾಪಾಡಲು ನರಕಕ್ಕೆ ಹೋಗುವುದರಲ್ಲಿಯೂ ನನಗೆ ವಿಶ್ವಾಸ. ಪಾಶ್ಚಾತ್ಯರ ವಿಷಯವಾಗಿ ಮಾತನಾಡುವೆಯಲ್ಲವೆ? ನನಗವರು ಅನ್ನನೆರಳು ಕೊಟ್ಟು ನನ್ನಲ್ಲಿ ಸ್ನೇಹ ಬೆಳಸಿದ್ದಾರೆ, ನನ್ನನ್ನು ಕಾಪಾಡಿದ್ದಾರೆ ಅವರು. ಅತ್ಯಂತ ಗೊಡ್ಡು ಕಿರಸ್ತಾನರು ಕೂಡ ಈಪರಿ ಮಾಡಿದ್ದಾರೆ. ಅವರ ಪುರೋಹಿತರು ನಮ್ಮ ಇಂಡಿಯಕ್ಕೆ ಹೋದಾಗ ನಮ್ಮವರು ಮಾಡುವುದೇನು? ಅವರನ್ನು ಮುಟ್ಟುವುದು ಕೂಡ ಇಲ್ಲ. ಏಕೆಂದರೆ ಅವರು ಮ್ಲೇಂಛರು. ಇತರರನ್ನು ದ್ವೇಷಿಸಿ ಯಾವನು ತಾನೇ ಬದುಕಿಯಾನು! ಯಾವ ಜಾತಿ ತಾನೆ ಈಪರಿ ಮಾಡಿ ಬದುಕೀತು? ನಮ್ಮವರು ಮ್ಲೇಂಛ ಶಬ್ದವನ್ನು ಎಂದು ಕಲ್ಪಿಸಿ ಇತರರ ಸಂಪರ್ಕವನ್ನು ಬಿಟ್ಟ

ರೋ ಅಂದೇ ಭಾರತವರ್ಷದ ಉನ್ನತಿಗೆ ಮುದ್ರೆ ಬಿದ್ದಿತು. ಅಂತಹ ಆಲೋಚನೆಗೆ ಎಡೆಮಾಡಿಕೊಡಬೇಡ. ವೇದಾಂತವನ್ನು ಬಾಯಲ್ಲಿ ತಡೆಯಿಲ್ಲದೆ ನುಡಿಯಬಹುದು. ಆದರೆ ಅದರ ಅತ್ಯಂತ ಅಲ್ಪವಾದ ನಿಯಮಗಳನ್ನು ಕೂಡ ಆಚರಣೆಗೆ ತರುವುದು ಕಷ್ಟ.

ಆಶೀರ್ವಾದಗಳೊಡನೆ,

ನಿನ್ನ ವಿವೇಕಾನಂದ.

ತಾ. ಕ. ಅಧಿಕಾರದಲ್ಲಿ ಆಸೆ ಹೊಟ್ಟೆಕಿಚ್ಚು ಇವೆರಡರ ವಿಷಯದಲ್ಲಿ ಬಲು ಜೋಕೆಯಾಗಿರು. ಆತ್ಮಾವಲಂಬನೆಯನ್ನು ಸಂತತವೂ ಕೃಷಿಮಾಡು.

* * * *

ನ್ಯೂಯಾರ್ಕ್

೧೯ನೆಯ ನವಂಬರ್ ೧೮೯೪

ಎನ್ನ ಕೆಚ್ಚೆದೆಯ ಯುವಕರಿರಾ!

ನಿಮ್ಮ ಕಾರ್ಯಸಂಬಂಧವಾದ ಚೇಷ್ಟೆಯನ್ನು ಮುಂದರಿಸಿರಿ... ..........................ಪ್ರೇಮ, ಆಕಾಪಟ್ಯ, ಸಹನ ಇವು ಹೊರತು ಬೇರೆ ಯಾವುದೂ ಬೇಕಿಲ್ಲ. 'ಪ್ರಾಣ' ದ ಅರ್ಥವೇನಯ್ಯಾ? ಉನ್ನತಿ ಎಂದರೆ ಹೃದಯವಿಸ್ತಾರ ಎಂದರೆ ಪ್ರೇಮ. ಈ ಅರ್ಥವಲ್ಲದೆ ಮತ್ತೇನು! ಆದುದರಿಂದ ಪ್ರೇಮವೇ ಪ್ರಾಣ. ಇದೊಂದು ಮಾತ್ರ ಜೀವನಗತಿ ನಿಯಾಮಕವು. ಸ್ವಾರ್ಥಪರತೆಯೇ ಮೃತ್ಯು ಇದು ಇಹಪರಗಳೆರಡರಲ್ಲಿಯೂ ಸತ್ಯ. ಪರೋಪಕಾರವೇ ಪ್ರಾಣ. ಪರೋಪಕಾರ ರಾಹಿತ್ಯವೇ ಮೃತ್ಯು. ಮನುಷ್ಯರಲ್ಲಿ ಶೇಕಡ ತೊಂಭತ್ತೊಂಬತ್ತುಮಂದಿ ನರಪಶುಗಳು. ಅವರು ಸತ್ತವರಂತೆ; ಅವರು ಪ್ರೇತಸ್ವರೂಪರು. ಎನ್ನ ಹುಡುಗರಿರಾ ಬದುಕಿರುವವನಾರು ಬಲ್ಲಿರಾ! ಪ್ರೇಮಪೂರಿತನು. ಅವನೇ ಜೀವವುಳ್ಳವನು. ಸಹೃದಯರಾಗಿರಿ! ಎನ್ನ ಮಕ್ಕಳಿರಾ! ಸಹೃದಯರಾಗಿರಿ. ಬಡವರು ಮೂಢರು ನೆಲಕ್ಕೆ ಮೆಟ್ಟಿದವರು ಇವರಲ್ಲಿ ಸೌಹಾರ್ದವನ್ನು ತೋರಿಸಿರಿ. ನಿಮ್ಮೆದೆಯ ಡವಡವಿಕೆ ನಿಂತು ನಿಮ್ಮ ತಲೆ ತಿರುಗಿ ಎಲ್ಲಿ ಹುಚ್ಚು ಹಿಡಿಯುವುದೋ ಎನ್ನುವಷ್ಟು ಸಹೃದಯರಾಗಿರಿ. ತರು

ವಾಯು ಬಿಚ್ಚಿರಿ ಆ ಜಗದೀಶನಡಿದಾವರೆಗಳಲ್ಲಿ ನಿಮ್ಮೆದೆಗಳನ್ನು. ಬರುವುದಾಗ ಬಲ, ಸಾಹಾಯ್ಯ ಅದಮ್ಯಶಕ್ತಿ. 'ಹೋರಾಡು, ಹೋರಾಡು' ಎಂಬುದೇ ಕಳೆದ ಹತ್ತುವರ್ಷಗಳೂ ನನ್ನ ಆದರ್ಶವಾಗಿದ್ದಿತು. ಈಗಲೂ ನಾನು ಹೇಳುವುದೇನು? 'ಹೋರಾಡು.' ಸುತ್ತಲೂ ಕತ್ತಲೆ ಕವಿದಾಗ 'ಹೋರಾಡು' ಎಂದು ಹೇಳುತ್ತಿದ್ದೆನು. ಬೆಳಕು ಹರಿಯುತ್ತಿರುವಾಗ ಈಗಲೂ 'ಹೋರಾಡು' ಎಂಬುದೇ ನನ್ನ ಮಾತು. ಭಯ ಬೇಡಿರಪ್ಪ, ಎನ್ನ ಮಕ್ಕಳಿರಾ! ತಾರಾ ನಿಬಿಡವಾದೀ ಅನಂತಾಕಾಶವು ನಿಮ್ಮ ತಲೆಯಮೇಲೆ ಬಿದ್ದು ನಿಮ್ಮನ್ನು ನಜ್ಜುಗುಜ್ಜು ಮಾಡುವುದೆಂಬ ಭೀತಿಭಾವದಿಂದ ತಲೆ ಎತ್ತಿ ನೋಡದಿರಿ. ಸ್ವಲ್ಪ ತಾಳಿರಿ. ಅದೇ ನಿಮ್ಮ ಕಾಲುಗಳ ಬಳಿ ಬಂದೆರಗುವುದು ಬೇಗನೆ ಕೊಂಚ ತಾಳಿರಯ್ಯ, ಹಣ ಒದಗದು, ಹೆಸರೊದಗದು, ಕೀರ್ತಿ ಒದಗದು, ಪಾಂಡಿತ್ಯ ಒದಗದು. ಇದಾವುದೂ ಕೆಲಸಕ್ಕೆ ಬಾರದು. ಉಪಯೋಗವಾಗುವುದಾವುದೆಂಬೆಯೋ! ಪ್ರೇಮ. ಕಷ್ಟವೆಂಬ ವಜ್ರದಷ್ಟು ಗಟ್ಟಿಯಾದ ಭಿತ್ತಿಗಳನ್ನು ಭೇದಿಸಿ ದಾರಿಮಾಡಿಕೊಂಡು ಮುಂದುವರಿಯುವದಾವುದೆಂದರೆ ಚರಿತ್ರ ನಡತೆ.

ನಮ್ಮ ಮುಂದಿರುವ ಪಶ್ನೆ ಇದೀಗ. ಸ್ವಾತಂತ್ರ್ಯವಿರದೆ ಉನ್ನತಿ ಬರಲಾರದು. ನಮ್ಮ ಹಿಂದಣವರು ಧರ್ಮವಿಷಯವಾದ ಆಲೋಚನೆಗಳಿಗೆ ಕಟ್ಟುಗಳನ್ನು ಹಾಕಿ ಬಿಗಿಯಲಿಲ್ಲ. ಆದುದರಿಂದ ಅದ್ಭುತವಾಗಿರುವುದು ನಮ್ಮ ಧರ್ಮ. ಸಮಾಜದ ಕಾಲುಗಳಿಗೆ ಭಾರವಾದ ಬೇಡಿಗಳನ್ನು ಅವರು ತೊಡಿಸಿದುದರಾದ ಕಾರಣ ನಮ್ಮ ಸಮಾಜವು—ಒಂದೇ ಮಾತಿನಲ್ಲಿ ಹೇಳುತ್ತೇನೆ ಕೇಳಿರಿ—ಭಯಾವಹವಾಗಿ ಪೈಶಾಚಿಕತಾ ಪೂರ್ಣವಾಗಿರುವುದು. ಪಾಶ್ಚಾತ್ಯರಲ್ಲಿ ಸಮಾಜಕ್ಕೆ ನಿತ್ಯ ಸ್ವಾತಂತ್ರ್ಯವಿದ್ದುದರಿಂದ ಅವರ ಸಮಾಜವನ್ನು ನೋಡು-ಮತ್ತೆ ಅವರ ಧರ್ಮ ಹೇಗಿರುವುದೋ ಅದನ್ನೂ ನೋಡು.

ಉನ್ನತಿಗೆ ಮೊಟ್ಟಮೊದಲು ಆವಶ್ಯಕವಾದುದು ಸ್ವಾತಂತ್ರ್ಯ. ಓರ್ವನಿಗೆ ಆಲೋಚನೆ ಮಾಡುವುದಕ್ಕೂ, ಆಲೋಚಿಸಿದುದನ್ನು ಬಹಿರಂಗ ಪಡಿಸುವುದಕ್ಕೂ ಸ್ವಾತಂತ್ರ್ಯವು ಹೇಗೆ ಆವಶ್ಯಕವೋ ಅಪರಿಯಾಗಿಯೇ

ಆಹಾರ, ವಸ್ತ್ರ, ವಿವಾಹ ಇವೇ ಮುಂತಾದ ಇತರ ವಿಷಯಗಳಲ್ಲಿಯೂ ಸ್ವಾತಂತ್ರ್ಯವಿರಲೇಬೇಕು—ಇತರರಿಗೆ ಅವನ ಕೃತ್ಯದಿಂದ ಕೆಡಕಾಗದವರೆಗ.

ಬಾಹ್ಯಸಭ್ಯತೆಗೆ ವಿರೋಧವಾಗಿ ಹುಚ್ಚರಂತೆ ಮಾತನಾಡುವೆವಲ್ಲವೆ ನಾವು! ದ್ರಾಕ್ಷಿಹಣ್ಣು ಕೈಗೆ ಎಟಕದಿದ್ದರೆ ಅದು ಹುಳಿ ಎಂದು ಹೇಳುವ ಪರಿ ಅಲ್ಲವೇ ಇದು! ಇರಲಿ. ಈ ಹುಚ್ಚುಮಾತನ್ನು ಒಪ್ಪಿಕೊಂಡು ಭಾರತವರ್ಷದಲ್ಲೆಲ್ಲಾ ಒಂದುಲಕ್ಷ ನಿಜವಾಗಿಯೂ ಆಧ್ಯಾತ್ಮಿಕನಿಷ್ಠೆಯುಳ್ಳ ಸ್ತ್ರೀಪುರುಷರಿರುವರೆಂದು ಹೇಳೋಣ. ಇವರ ಆಧ್ಯಾತ್ಮಿಕೋನ್ನತಿಗಾಗಿ ಮೂವತ್ತು ಕೋಟಿ ಪ್ರಜೆಗಳು ಅಸಭ್ಯರಾಗಿ ಹೊಟ್ಟಿಗಿಲ್ಲದೆ ಹೋಗಬೇಕೇನು! ಯಾವನೇ ಆಗಲಿ ಉಪವಾಸವೇಕಿರಬೇಕು? ಮುಹಮ್ಮದೀಯರು ಬಂದು ಹಿಂದುಗಳನ್ನು ಸೋಲಿಸಿದುದು ಹೇಗೆ ಸಾಧ್ಯವಾಯಿತು ಬಲ್ಲೆಯಾ! ಹಿಂದುಗಳಿಗೆ ಬಾಹ್ಯಸಭ್ಯತೆ ಇಲ್ಲದೆ ಹೋದುದೇ ಕಾರಣ. ಚಿಪ್ಪಿಗನ ಕೈದಾಟಿದ ವಸ್ತ್ರಗಳ ಧಾರಣವನ್ನು ಕೂಡಾ ಮುಹಮ್ಮದೀಯರು ಕಲಿಸಿಕೊಟ್ಟರು ನಮ್ಮ ಹಿಂದುಗಳಿಗೆ. ರಸ್ತೆಯಧೂಳು ಸೇರಿದ ಆಹಾರವನ್ನು ಚೊಕ್ಕಟವಾಗಿ ತಿನ್ನುವ ಪರಿಯನ್ನು ಹಿಂದುಗಳು ಮುಹಮ್ಮದೀಯರಿಂದ ಕಲಿಯಬೇಕಾಗಿತ್ತೆಂಬುದು ನನ್ನ ಕೋರಿಕೆ. ಈ ಭೌತಿಕ ಸಭ್ಯತೆ-ಇಷ್ಟೇ ಅಲ್ಲಪ್ಪ-ಸುಖೋಪ ಭೋಗಗಳು ಕೂಡ ಬಡವರಿಗೆ ಕೆಲಸ ಕೊಡುವುದಕ್ಕಾಗಿ ಆವಶ್ಯಕ. ಹಿಟ್ಟಯ್ಯಾ! ಹಿಟ್ಟು! ಇಹದಲ್ಲಿ ನನ್ನ ಹೊಟ್ಟೆಗೆ ಹಿಟ್ಟು ಕೊಡಲಾರದ ಪರದಲ್ಲಿ ನಿತ್ಯಾನಂದವನ್ನು ಕೊಡುವ ದೇವರಲ್ಲಿ ನನಗೆ ನಂಬಿಕೆಯಿಲ್ಲ. ಭೂಗತವಾಗಿರುವ ಭಾರತ ಭೂಮಿ ಎದ್ದು ನಿಲ್ಲಬೇಕು. ಬಡವರಿಗೆ ಅನ್ನದಾನವಾಗಬೇಕು. ವಿದ್ಯಾಭ್ಯಾಸ ಹರಡಬೇಕು. ಪುರೋಹಿತರ ಅತ್ಯಾಚಾರ ಅನಾಚಾರಗಳ ಕೆಡುಕು ನಿವಾರಣೆಯಾಗಬೇಕು. ಪುರೋಹಿತರ ಕೌಟಿಲ್ಯ ಕೂಡದು, ಆದರೆ ಬೇಕಾದುದೇನು? ಹೊಟ್ಟೆ ತುಂಬ ಹಿಟ್ಟು. ಪ್ರತಿಯೊಬ್ಬನಿಗೂ ಮುಂದೆ ಹೋಗಲು ಅವಕಾಶ. ಬ್ರಿಟಿಷರಿಂದ ಹೆಚ್ಚು ಅಧಿಕಾರವನ್ನು ಪಡೆಯಲು ನಮ್ಮ ಹುಚ್ಚು ಹುಡುಗರು ಸಭೆಕೂಡುವರಲ್ಲವೆ? ಅವರು ನೋಡಿ ನಗುತಲ್ಲಾರೆ. ಸ್ವಾತಂತ್ರ್ಯವನ್ನು

ಇತರರಿಗೆ ಕೊಡಲಿಕ್ಕೆ ಸಿದ್ಧನಾಗಿರದವನು ಸ್ವಾತಂತ್ರ್ಯವನ್ನು ಪಡೆಯಲಿಕ್ಕೆ ಅನರ್ಹನು. ಇಂಗ್ಲೀಷರು ಸರ್ವಸ್ವಾತಂತ್ರ್ಯವನ್ನು ನಿಮಗೆ ಕೊಟ್ಟರೆಂದು ಊಹಿಸೋಣ. ಆಗ ಅಧಿಕಾರಕ್ಕೆ ಬರುವ ನಮ್ಮವರೇ ಪ್ರಜೆಗಳನ್ನು ಮೆಟ್ಟಿ ಅವರಿಗೆ ಸ್ವಾತಂತ್ರ್ಯವನ್ನು ಕೊಡರು. ಗುಲಾಮರು ಅಧಿಕಾರವನ್ನು ಬಯಸುವುದು ಏತಕ್ಕೆಂದರೆ ಇತರರನ್ನು ಗುಲಾಮಗಿರಿಗೆಳೆಯುವುದಕ್ಕಾಗಿ.

ಈಗಲಾದರೋ ನಮ್ಮ ಧರ್ಮವನ್ನೇ ಒತ್ತಿ ಹೇಳಿ, ಸಮಾಜಕ್ಕೆ ಸ್ವಾತಂತ್ರ್ಯವನ್ನು ಕೊಡುವುದರ ಮೂಲಕ ನಮ್ಮ ಇಷ್ಟಾರ್ಥವು ಮೆಲ್ಲನೆ ಸಿದ್ಧಿಸಬೇಕು. ನಮ್ಮ ಸನಾತನ ಧರ್ಮಕ್ಕೆ ಸುತ್ತಿಕೊಂಡಿರುವ ಪುರೋಹಿತರ ಅತ್ಯಾಚಾರ, ಅನಾಚಾರಗಳೆಂಬ ಕಳೆಗಳನ್ನು ಬೇರುಸಹಿತ ಕಿತ್ತೊಗೆದರೆ ನಿಲ್ಲುವುದೇನು ಬಲ್ಲೆಯಾ! ಜಗತ್ತಿನಲ್ಲೆಲ್ಲಾ ಸರ್ವಶ್ರೇಷ್ಠವಾದ ಧರ್ಮ. ನಾನು ಹೇಳುವುದು ತಿಳಿಯಿತೆ? ನಮ್ಮ ಧರ್ಮ ಹಿಂದೂ ಧರ್ಮವೇ ಆಗಿರಬೇಕು. ಆದರೆ ನಮ್ಮ ಸಮಾಜವು ಐರೋಪ್ಯರದಂತಿರಬೇಕು, ಈ ಪರಿ ಮಾಡಬಲ್ಲೆಯಾ! ಅದು ಸಾಧ್ಯವೆಂಬುದು ನನ್ನ ನಂಬುಗೆ. ಸಾಧ್ಯವಾಗಿರಲೇಬೇಕು ....................ಇದಕ್ಕೆ ದೊಡ್ಡದಾದ ಕಾರ್ಯೋಪಾಯ ಆವಶ್ಯಕ. ಅದೇನೆಂದರೆ ಮಧ್ಯಭಾರತವರ್ಷದಲ್ಲಿ ಉಪನಿವೇಶವೊಂದನ್ನು ಸ್ಥಾಪಿಸಿ, ಅಲ್ಲಿ ನಮ್ಮ ಅಭಿಪ್ರಾಯಗಳಿಗನುಸಾರವಾಗಿ ಸ್ವಾತಂತ್ರ್ಯದೊಡನೆ ನಡೆದುಕೊಳ್ಳುವುದು ಈ ಪರಿ ಮಾಡಿದರೆ ನಮ್ಮ ಅಭಿಪ್ರಾಯಗಳು ಇತರ ಕಡೆಗಳಿಗೂ ಹರಡಿಕೊಳ್ಳುವುವು. ಈ ನಡುವೆ ಕೇಂದ್ರ ಸಂಘವೊಂದನ್ನು ಸ್ಥಾಪಿಸಿ ಅದರ ಶಾಖೆಗಳನ್ನು ಇತರ ಕಡೆಗಳಲ್ಲೆಲ್ಲಾ ಏರ್ಪಡಿಸಿರಿ. ಈಗ ಮೊದಲು ಧರ್ಮ ಸಂಬಂಧವಾದ ತಳಹದಿಯಮೇಲೆ ಸಂಘವು ಏಳಲಿ. ಸದ್ಯಕ್ಕೆ ಒತ್ತರದ ಯಾವುದೊಂದು ಸಾಮಾಜಿಕ ಸುಧಾರಣೆಗೂ ಕೈ ಹಾಕಬೇಡಿರಿ. ಆದರೆ ಮೂಢ ಭಕ್ತಿ ಮುಂತಾದುವುಗಳ ತಲೆ ಎತ್ತಗೊಡಿಸದಿರಿ. ಶ್ರೀ ಶಂಕರ, ಶ್ರೀ ರಾಮಾನುಜ, ಶ್ರೀ ಚೈತನ್ಯರೇ ಮುಂತಾದ ನಮ್ಮ ಪ್ರಾಚೀನ ದೇಶಿಕೋತ್ತಮರು ವಿಧಿಸಿರುವಂತೆ ಮುಕ್ತಿ ಸಕಲರಿಗೂ ಉಂಟು, ಸರ್ವ

ಸಮತ್ವವೂ ಉಂಟು ಎಂಬ ಆಧಾರಗಳ ಮೇಲೆ ಸಾಮಾಜಿಕ ಪುನರುಜ್ಜೀವನವನ್ನು ಕೈಕೊಳ್ಳಿರಿ. ಉತ್ಸಾಹಪೂರಿತರಾಗಿರಿ. ಆ ಬೆಂಕಿ ಹರಡುವುದೆಲ್ಲೆಲ್ಲಿಯೂ. ಕಾರ್ಯ ಮಾಡಬೇಕಪ್ಪಾ-ದುಡಿಯಬೇಕಯ್ಯ. ಸುಮ್ಮನಿದ್ದರಾಗದು. ಮುಂದಾಳಾಗಿ ನಿಂತರೂ ಸೇವಕನಂತಿರು. ದೂರ ಮಾಡು ಸ್ವಾರ್ಥವನ್ನು. ಒಬ್ಬಸ್ನೇಹಿತನು ಮತ್ತೊಬ್ಬನನ್ನು ರಹಸ್ಯದಲ್ಲಿ ಮಾಡುವ ದೂಷಣೆಗೆ ಕಿವಿಗೊಡದಿರು. ಅನಂತವಾದ ತಾಳ್ಮೆಯನ್ನು ತಾಳು ಸಿದ್ಧಿಸುವುದು ನಿನ್ನ ಕಾರ್ಯ......................ಆದರೆ ಈ ವಿಷಯದಲ್ಲಿ ಮಾತ್ರ ಜೋಕೆ. ಅಮೆರಿಕನರು ಹೇಳುವಂತೆ ಇತರರಮೇಲೆ ನೀನು 'ಬಾಸ್ ಮಾಡಬೇಡ' ಎಂದರೆ ನಿನ್ನ ಕೈ ಚಲಾಯಿಸಬೇಡ. ನಾನು ಯಾವಾಗಲೂ ನಿನಗೆ ಪತ್ರವನ್ನು ಬರೆಯುವುದರಿಂದ ನನಗೆ ನನ್ನ ಇತರ ಸ್ನೇಹಿತರಿಗಿಂತಲೂ ನೀನು ಹೆಚ್ಚೆಂದು ಹೆಮ್ಮೆ ಬೇಡ ನಿನಗೆ. ನೀನೆಂದೂ ಅಂತಹ ಹುಚ್ಚನಲ್ಲವೆಂಬುದನ್ನು ಬಲ್ಲೆ ನಾನು. ಆದರೆ ಈ ವಿಷಯದಲ್ಲಿ ನಾನು ಎಚ್ಚರಿಕೆ ಕೊಡುವುದು ನನ್ನ ಕರ್ತವ್ಯವೆಂಬುದು ನನ್ನ ಮನದೆಣಿಕೆ. ಸಂಸ್ಥೆಗಳನ್ನು ಹಾಳುಮಾಡುವುದಿದೀಗ. ಕಾರ್ಯ ಮಾಡು ದುಡಿ. ಏಕೆಂದರೆ ಪರೋಪಕಾರವೇ ಪ್ರಾಣ.

ಕಾಪಟ್ಯ ವಂಚನೆ ಇವು ಕೂಡದು. ನನ್ನಭಾರ ಯಾವಾಗಲೂ ದೇವರ ಮೇಲೆ. ಹಗಲಿನ ಬೆಳಕಿನಷ್ಟು ವಿಶಾಲವಾದ ಸತ್ಯವೇ ನನಗೆ ಸಂತತಾಶ್ರಯವು. ಹೆಸರಿಗಾಗಲೀ ಯಶಸ್ಸಿಗಾಗಲೀ ಇಲ್ಲಪ್ಪ-ಒಳ್ಳೆಯದನ್ನು ಮಾಡುವುದಕ್ಕಾಗಲೀ ವಂಚನೆ ಮಾಡಿದೆನೆಂಬ ಹೃದಯ ಕಳಂಕವನ್ನಿಟ್ಟುಕೊಂಡು ಸಾವು ಬೇಡ ನನಗೆ. ದುರ್ವೃತ್ತತೆ ದುಶ್ಚರಿತ್ರೆ ಇವುಗಳ ಉಸುರೇ ಕೂಡದು. ದುರ್ಮಾರ್ಗವೇ ಕೂಡದು.

ತಕ್ಕಾ ಬಿಕ್ಕಿ ರಹಸ್ಯವಾದ ನೀಚತನ ಗೂಢವಾದ ಮೋಸ ಇವಾವುದೂ ಕೂಡದು. ಗುರುವಿನ ವಿಶೇಷ ಪಕ್ಷಪಾತ ಕೂಡದು. ಹಾಗಿದ್ದಲ್ಲಿ ಗುರುವೇ ಬೇಡ. ವಿಸ್ಮ ಕೆಚ್ಚೆದೆಯ ಯುವಕರಿರಾ! ಮುಂದೆ ನಡೆಯಿರಿ. ಹಣವಿರಲಿ-ಇಲ್ಲದೆಹೋಗಲಿ ಮನುಷ್ಯರಿರಲಿ ಇಲ್ಲದೆ ಇರಲಿ-ಪ್ರೇಮ ಉಂಟೇನು ನಿಮಗೆ? ದೇವರಿದ್ದಾನೆ ನಿಮ್ಮ ಪರವಾಗಿ. ಮುಂದೆ ಹೋಗಿರಿ. ನಿಮ್ಮನ್ನು ತಡೆಯುವವರಾರು?

ಇದೇನು ಹುಚ್ಚುತನ! ನನ್ನ ಕಾರ್ಯಸಿದ್ಧಿಗೆ ನನ್ನ ಜಯಕ್ಕೆ ಥಿಯಸಾಫಿಕಲ್ ಪತ್ರಿಕೆಗಳು ದಾರಿಮಾಡಿಕೊಟ್ಟವೆ! ಚನ್ನಾಯಿತು! ಇದು ಅಪ್ಪಟ ಸುಳ್ಳು. ಥಿಯಸಾಫಿಸ್ಟರೇ ನನಗೆ ದಾರಿ ಸರಿಮಾಡಿ ಕೊಟ್ಟವರು!.........................

ಎಲ್ಲಪ್ಪ ಎಚ್ಚರಿಕೆ. ಸುಳ್ಳಿನ ವಿಷಯದಲ್ಲಿ ಅದಾವುದೇ ಆಗಲಿ ಜೋಕೆ. ಸತ್ಯವನ್ನೇ ಬಲವಾಗಿ ಹಿಡಿ. ತಡವಾದರೂ ಜಯವು ನಿಶ್ಚಯ. ನಾನಿಲ್ಲದದ್ದಂತೆ ಭಾವಿಸಿ ಕಾರ್ಯವನ್ನು ಮುಂದರಿಸಿರಿ. ಸಕಲವನ್ನೂ ನಿಮ್ಮಲ್ಲಿ ಪ್ರತಿಯೊಬ್ಬನ ತಲೆಯಮೇಲಣ ಹೊರೆಯಂತೆ ತಿಳಿದು ಕಾರ್ಯವನ್ನು ನಡೆಯಿಸಿರಿ. ಕಳೆದ ಐವತ್ತು ಶತಮಾನಗಳು ನಿಮ್ಮನ್ನೇ ನೋಡುತ್ತಲಿವೆ. ಭಾರತಭೂಮಿಯ ಭವಿಷ್ಯತ್ತು ನಿಮ್ಮನ್ನು ಆಶ್ರಯಿಸಿದೆ; ಕೆಲಸಮಾಡಿರಿ. ನಾನೆಂದು ಬರುವೆನೋ ನಾನರಿಯೆ. ಈ ದೇಶವು ಕಾರ್ಯಕ್ಕೆ ವಿಶಾಲವಾದೊಂದು ಕ್ಷೇತ್ರ. ಭಾರತಭೂಮಿಯಲ್ಲಿ ಅಪ್ಪಪ್ಪ ಎಂದರೆ ಸ್ತೋತ್ರ ಮಾಡಿಯಾರು; ಕಾಸುಮಾತ್ರ ಕೊಡರು. ಅವರೇ ಭಿಕಾರಿಗಳಾಗಿರುವಾಗ ಕಾಸೆಲ್ಲಿ ಸಿಕ್ಕೀತು ಅವರಿಗೆ! ಇದಲ್ಲದೆ ಕಳೆದ ಎರಡುಸಾವಿರ ಅಥವಾ ಅದಕ್ಕೆ ಹೆಚ್ಚಾದ ವರುಷಗಳಿಂದ ನಮ್ಮಲ್ಲಿ ಲೋಕೋಪಕಾರ ಬುದ್ಧಿಯೇ ನಷ್ಟವಾಗಿರುವುದು- ಜಾತಿ ಜನಹಿತ ಮುಂತಾದ ಪದಗಳ ಅರ್ಥವನ್ನು ಈಗತಾನೇ ಕಲಿಯುತ್ತಿದ್ದಾರೆ. ಆದುದರಿಂದ ಅವರನ್ನು ನಾನು ನಿಂದಿಸ ಕೆಲಸವಿಲ್ಲ. ಮುಂದೆ ಬರೆಯುವೆನು ಹೆಚ್ಚಾಗಿ.

ಆಶೀರ್ವಾದಗಳೊಡನೆ.

ನಿಮ್ಮ ವಿವೇಕಾನಂದ.

ರೋಸ್ ಬ್ಯಾಂಕ್.

ವರ್ಧಮಾನ ರಾಜವಾಡೀ, ಡಾರ್ಜಿಲಿಂಗ್,

೬ನೆಯ ಏಪ್ರಿಲ್ ೧೮೯೭.

ಮಾನ್ಯರೇ!

ತಾವು ಕಳುಹಿಸಿದ 'ಭಾರತೀ' ಪತ್ರಿಕೆಯಿಂದ ವಿಶೇಷವಾಗಿ ಅನುಗೃಹೀತನಾಗಿದ್ದೇನೆ ನಾನು. ಯಾವ ಉದ್ದೇಶಸಾಧನೆಗಾಗಿ ನನ್ನೀ

ಕ್ಕಿದ್ದ ಜೀವನವನ್ನು ನಾನು ವ್ಯಸ್ತಮಾಡಿದ್ದೇನೆಯೋ ಅದು ತಮ್ಮಂತಹ ಮಹಾನುಭಾವರ ಮೆಚ್ಚನ್ನು ಸಂಪಾದಿಸಲು ಸಮರ್ಥವಾದ ವಿಷಯ ದಲ್ಲಿ ನಾನು ಧನ್ಯನೆಂಬುದೇ ನನ್ನ ಭಾವನೆ.

ಈ ಬಾಳಿನ ಹೋರಾಟದಲ್ಲಿ ನವೀನ ಭಾವಗಳ ಸಮುದ್ಧಾರಕರನಿಗೆ ಉತ್ತೇಜವನ್ನು ಕೊಡುವವರ ತಿವಿರಳ–ಉತ್ತೇಜನ ಕೊಡುವ ಸ್ತ್ರೀಯರ ಮಾತು ಹಾಗಿರಲಿ–ಈ ನಮ್ಮ ದುರ್ಭಾಗ್ಯದೇಶದಲ್ಲಿ. ಆದುದರಿಂದಲೇ ಇಡೀ ಭಾರತ ವರ್ಷದ ಪುರುಷರೆಲ್ಲರ ಉಚ್ಚಕಂಠ ಸಾಧು ವಾದಕ್ಕಿಂತಲೂ ವಂಗದೇಶದ ವಿದುಷಿಯೋರ್ವಳ ಮೆಚ್ಚು ಅಧಿಕ ಶ್ಲಾಘ್ಯವು. ತಮ್ಮಂತಹ ರಮಣಿಯರನೇಕರು ಈ ದೇಶದಲ್ಲಿ ಮೈವೆತ್ತು ತಮ್ಮ ಜೀವನವನ್ನು ನಮ್ಮ ಮಾತೃಭೂಮಿಯ ಉನ್ನತಿಗಾಗಿ ವಿನಿಯೋಗಿಸುವಂತೆ ಭಗವಂತನು ಕರುಣಿಸಲಿ.

ಭಾರತೀಪತ್ರಿಕೆಯಲ್ಲಿ ತಾವು ನನ್ನನ್ನು ಕುರಿತು ಬರೆದಿರುವ ಪ್ರಬಂಧ ವಿಷಯವಾಗಿ ನಾನು ಹೇಳತಕ್ಕುದು ಕೊಂಚವಿದೆ. ಅದೇನೆಂದರೆ ಪಾಶ್ಚಾತ್ಯದೇಶದಲ್ಲಿ ಈಗ ನಡೆಯುತಕ್ಕಧರ್ಮಪ್ರಚಾರವು ಭಾರತವರ್ಷದ ಮಂಗಳಕ್ಕಾಗಿಯೇ. ಪಾಶ್ಚಾತ್ಯರು ನಮಗೆ ಸಹಾಯ ಮಾಡದಿದ್ದರೆ ನಾವು ಮೇಲೆ ಏಳಲಾರವೆಂಬುದು ನನ್ನ ನಂಬಿಕೆ. ಈ ದೇಶದಲ್ಲಿ ಗುಣಕ್ಕೆ ಮೆಚ್ಚುಗೆಯಿಲ್ಲ ಅರ್ಥಬಲವಿಲ್ಲ. ಎಲ್ಲಕ್ಕಿಂತಲೂ ಶೋಚನೀಯ ವಾದುದೇನೆಂದರೆ, ಕೃತಕರ್ಮತೆ ಮೊದಲೇ ಇಲ್ಲ.

ಉದ್ದೇಶಗಳೇನೋ ಅನೇಕ, ಆದರೆ ಉಪಾಯಗಳಿಲ್ಲೀದೇಶದಲ್ಲಿ. ನಮಗೆ ಮಸ್ತಕಗಳಿವೆ, ಹಸ್ತಗಳಿಲ್ಲ. ವೇದಾಂತ ಮತವಿದೆ ಆದರೆ ಅದನ್ನು ಕಾರ್ಯದಲ್ಲಿ ತೋರಿಸುವ ಕ್ಷಮತೆಯಿಲ್ಲ. ನಮ್ಮ ಪುಸ್ತಕಗಳಲ್ಲಿರುವುದೇನೋ ಮಹಾ ಸಾಮ್ಯವಾದ. ಆದರೆ ನಮ್ಮ ಕಾರ್ಯದಲ್ಲಿ ಮಹಾ ಭೇದಬುದ್ಧಿ. ಮಹಾ ನಿಸ್ವಾರ್ಥ ನಿಷ್ಕಾಮ ಕರ್ಮ ಇವು ಪ್ರಚಾರಿತವಾದುದು ಭಾರತವರ್ಷದಲ್ಲಿ. ಆದರೋ ಕಾರ್ಯದಲ್ಲಿ ನಾವು ಅತಿ ನಿರ್ದಯರು ಅತಿ ಹೃದಯಶೂನ್ಯರು. ಮಾಂಸದ ಮುದ್ದೆಯಾದೀ ದೇಹವನ್ನುಳಿದು ಇನ್ನಾವುದನ್ನೂ ಕುರಿತು ಚಿಂತಿಸಲಾರೆವು ನಾವು.

ಆದರೂ ಈಗಣ ಸ್ಥಿತಿಯನ್ನನುಸರಿಸಿಯೇ ಮುಂದೆ ಹೋಗಲು ಸಾಧ್ಯ. ಇಲ್ಲ ಇತರ ಉಪಾಯವಾವುದೂ. ಒಳ್ಳೆಯದು ಕೆಟ್ಟುದು ಎಂಬಿವುಗಳ ವಿಚಾರಶಕ್ತಿ ಇರುವುದು ಸರ್ವರಿಗೂ. ಆದರೆ ಈ ಸಮಸ್ತ ಭ್ರಮ ಪ್ರಮಾದ ದುಃಖಗಳಿಂದ ತುಂಬಿದ ಸಂಸಾರ ತರಂಗಗಳಿಗಂಜದೆ, ಒಂದು ಕೈಯಿಂದ ಕಣ್ಣೀರನ್ನೊರಸುತ ಸ್ವಲ್ಪವೂ ಅಲುಗದ ಮತ್ತೊಂದು ಹಸ್ತದಿಂದ ಉದ್ಧಾರ ಮಾರ್ಗವನ್ನು ತೋರಿಸುವಾತನೇ ವೀರ.

ಒಂದೆಡೆ ಜಡ ಪಿಂಡದಂತಹ ಹೋದ ಕಡೆಯೇ ಹೋಗುವ ಸಮಾಜ. ಮತ್ತೊಂದೆಡೆ, ಚಂಚಲನೂ ಆತುರನೂ ಬೆಂಕಿಯನ್ನು ಕಾರುವನೂ ಆದ ಸಂಸ್ಕಾರಕ. ಆದರೆ ಕಲ್ಯಾಣಮಾರ್ಗವೆಲ್ಲಿ ಎಂದರೆ ಇವೆರಡರ ಮಧ್ಯೆ. ಜಪಾನ್ ದೇಶದ ಹುಡುಗಿಯರು ತಮ್ಮ ಆಟದ ಗೊಂಬೆಗಳನ್ನು ತಾವು ಸಂಪೂರ್ಣ ಹೃದಯದಿಂದ ಒಲಿದ ಪಕ್ಷದಲ್ಲಿ ಅವು ಜೀವಕಳೆಗೊಳ್ಳುವು ವೆಂದು ಅವರಲ್ಲಿ ನಂಬಿಕೆ. ಆದುದರಿಂದ ಜಪಾನ್ ದೇಶದ ಹುಡುಗಿಯು ಒಡೆದುಹಾಕಳೆಂದೂ ತನ್ನ ಗೊಂಬೆಯನ್ನು. ಎಲೌ! ಸೌಭಾಗ್ಯ ವತಿ! ಭಾಗ್ಯಹೀನರೂ ದುರದೃಷ್ಟವಶರೂ ಲುಪ್ತ ಬುದ್ಧಿಯುಳ್ಳವರೂ ಪರರಿಂದ ನೆಲಕ್ಕೆ ಮೆಟ್ಟಿದವರೂ ನಿತ್ಯವೂ ಕ್ಷುತ್ ಪೀಡಿತರೂ ಜಗಳ ಗಂಟಿಗಳೂ ಹೊಟ್ಟೆಕಿಚ್ಚಿನವರೂ ಆದ ಸ್ವದೇಶೀಯರನ್ನು ಯಾವಾ ತನಾದರೂ ಸಂಪೂರ್ಣ ಹೃದಯದಿಂದ ಪ್ರೀತಿಸಿದ ಪಕ್ಷದಲ್ಲಿ ನಮ್ಮ ಭಾರತ ವರ್ಷವೂ ಜೀವಸಹಿತ ಮರಳಿ ಜಾಗ್ರತೆಗೊಳ್ಳುವುದೆಂದು ನಾನೂ ನಂಬುತ್ತೇನೆ. ಉದಾರ ಹೃದಯರಾದ ನೂರಾರು ಸ್ತ್ರೀಪುರುಷರು ಸಕಲ ವಿಲಾಸ ಭೋಗೇಚ್ಛೆಗಳನ್ನು ದೂರಮಾಡಿ ದಾರಿದ್ರ್ಯಅಜ್ಞಾನಗಳೆಂಬ ಸುಳಿಯಲ್ಲಿ ಮೆಲ್ಲನೆ ಕ್ರಮವಾಗಿ ಕೆಳ ಕೆಳಗೆ ಮುಳಗಿ ಹೋಗುತಲಿರುವ ತಮ್ಮ ದೇಶಬಾಂಧವಕೋಟಿಯ ಕಲ್ಯಾಣಕ್ಕಾಗಿ ಹಂಬಲಿಸುತ ತಮ್ಮ ಕೈಲಾಗುವ ಪ್ರಯತ್ನಗಳನ್ನೆಂದು ಕೈಕೊಳ್ಳುವರೋ ಅಂದು ತಾನೇ ಭಾರತ ವರ್ಷವು ಜಾಗ್ರುತೆಗೊಳ್ಳುವುದು. ಸದುದ್ದೇಶಗಳು, ಅಕಾಪಟ್ಯ, ಅನಂತಪ್ರೇಮ–ಇವು ವಿಶ್ವವನ್ನು ಜಯಿಸಬಲ್ಲವೆಂಬುದು ನನಗೆ ಪ್ರತ್ಯಕ್ಷ ವಾಗಿರುವುದೀ ನನ್ನ ಕ್ಷುದ್ರ ಜೀವನದಲ್ಲಿ. ಇಂತಹ ಗುಣಶಾಲಿಯೊ

ರ್ವನು ಕೋಟಿಕೋಟಿ ವಂಚಕರ ಕೆಟ್ಟ ಎಣಿಕೆಗಳನ್ನು ನಾಶಮಾಡಲು ಸಮರ್ಥನು.

ನಾನು ಪಾಶ್ಚಾತ್ಯ ದೇಶಕ್ಕೆ ಮರಳಿ ಸಂಚಾರ ಹೊರಡುವುದು ಸಂಶಯ. ಒಂದುವೇಳೆ ಹೋದರೆ ಅದೂ ಭಾರತ ವರ್ಷಕ್ಕಾಗಿಯೇ. ಜನಬಲವೆಲ್ಲಿರುವುದೀ ದೇಶದಲ್ಲಿ! ಎಲ್ಲಿರುವುದರ್ಥ ಬಲ! ಬಲು ಕೀಳ ರಾದ ಚಂಡಾಳರ ಸೇವೆಯನ್ನು ಭಾರತೀಯ ಭಾವದಲ್ಲಿ ಭಾರತ ಧರ್ಮ ದ್ವಾರಾ ಮಾಡಿ, ಭಾರತ ವರ್ಷದ ಕಲ್ಯಾಣವನ್ನೆಸಗಲು ಸಿದ್ಧರಾಗಿರುವರ ನೇಕ ಪಾಶ್ಚಾತ್ಯ ಸ್ತ್ರೀಪುರುಷರು. ಅಂಥವರೆಷ್ಟುಮಂದಿ ಇರುವರೀ ದೇಶದಲ್ಲಿ! ಇನ್ನು ಅರ್ಥಬಲವೆಲ್ಲಿ! ನನ್ನ ಅಭ್ಯರ್ಥನ ಕಾರ್ಯ ನಿರ್ವಾಹ ಕ್ಕಾಗಿ ಕಲ್ಕತ್ತಾ ನಿವಾಸಿಗಳು ನನ್ನನ್ನು ಲೆಕ್ಚರ್ ಕೊಡುವಂತೆ ಮಾಡಿ ಟಿಕೀಟುಗಳನ್ನು ಮಾರಿದರು. ಇದಕ್ಕಾಗಿ ನಾನಾರನ್ನೂ ನಿಂದಿಸೆನು, ಆರಮೇಲೂ ದೋಷಾರೋಪಣೆ ಮಾಡೆನು. ಪಾಶ್ಚಾತ್ಯ ದೇಶದಿಂದ ನಮಗೆ ಜನ ಧನ ಬಂದ ಹೊರತು ನಮ್ಮ ಕಲ್ಯಾಣವು ಅಸಂಭವವೆಂಬು ದನ್ನು ನಾನು ವ್ಯಕ್ತಗೊಳಿಸುತ್ತಿರುವುದು.

ಚಿರ ಕೃತಜ್ಞನೂ ತಮ್ಮ ಮಂಗಳಕ್ಕಾಗಿ ಜಗದೀಶನಲ್ಲಿ ಪ್ರಾರ್ಥಿ

ಸುವಾತನೂ ಆದ,

ವಿವೇಕಾನಂದ.

* * *

ಡಾರ್ಜೀಲಿಂಗ್,

C/o ಎಂ. ಎನ್. ಬಾನರ್ಜಿ,

೨೪ನೆಯ ಏಪ್ರಿಲ್, ೧೮೯೭.

ತಾಯೆ !.........................

ಕಾರ್ಯಪ್ರಣಾಳೀ ಸಂಬಂಧವಾದ ತಮ್ಮ ಜಿಜ್ಞಾಸದ ವಿಷಯ ದಲ್ಲಿ ಮೊದಲು ಹೇಳತಕ್ಕುದೇನೆಂದರೆ "ಫಲಾನುಮೇಯಾಃ ಪ್ರಾರಂ

ಭಾಃ " ಎಂಬುದು ಉಚಿತ. ನನ್ನ ಪ್ರಿಯ ಬಂಧುವಾದ ಮಿಸ್ ಮೂ ಲರ್ ಮುಖದಿಂದ ತಮ್ಮ ಉದಾರ ಬುದ್ಧಿ, ಸ್ವದೇಶ ವಾತ್ಸಲ್ಯ, ದೃಢ ಅಧ್ಯವಸಾಯ ಇವುಗಳ ವಿಷಯದಲ್ಲಿ ಬಹಳವಾಗಿ ಕೇಳಿದ್ದೇನೆ ನಾನು. ತಮ್ಮ ವಿದುಷೀತ್ವದ ಪ್ರಮಾಣ ಪ್ರತ್ಯಕ್ಷ. ಆದುದರಿಂದ ನನ್ನೀ ಕ್ಷುದ್ರ ಚೇಷ್ಟೆಯನ್ನು ಕುರಿತು ತಾವು ಅರಿಯಬೇಕೆಂಬ ತಮ್ಮ ಇಚ್ಛೆಯನ್ನು ನನ್ನ ಪರಮಭಾಗ್ಯವೆಂದೇ ಭಾವಿಸಿ, ನಾನೀ ಸಣ್ಣ ಪತ್ರದಲ್ಲಾಗುವಷ್ಟು ನಿವೇದನ ಮಾಡುವೆನು. ಆದರೆ ಮೊದಲು ತಮ್ಮ ವಿಚಾರಕ್ಕಾಗಿ ನನ್ನ ಅನುಭವಸಿದ್ಧ ಸಿದ್ಧಾಂತವನ್ನು ಅರಿಕೆಮಾಡುತ್ತೇನೆ ತಮ್ಮ ಸನ್ನಿ ಧಾನದಲ್ಲಿ.

ಚಿರಕಾಲದಿಂದ ಪರಾಧೀನರು ನಾವು. ಅದು ಕಾರಣ ಭಾರತ ಭೂಮಿಯಲ್ಲಿ ಸಾಮಾನ್ಯ ಜನರ ಆತ್ಮಸ್ವತ್ವ ಬುದ್ಧಿಯು ಉದ್ದೀಪಿತವಾ ಗಲು ಅವಕಾಶವಾಗಲಿಲ್ಲೆಂದೂ. ಪಾಶ್ಚಾತ್ಯ ಭೂಮಿಯಾದರೋ ಈಗ ಕಳೆದ ಕೆಲವು ಶತಾಬ್ದಗಳಿಂದ ಬೇಗ ಬೇಗನೆ ಸ್ವಾಧೀನತೆಯ ಮುಖವಾಗಿ ಮುಂದರಿಯುತ್ತಿರುವುದು. ಭಾರತ ವರ್ಷದಲ್ಲಿ ಕೌಲೀನ್ಯ ಹಿಡಿದು ಭೋಜ್ಯಾಭೋಜ್ಯ ಪರ್ಯಂತ ಸಮಸ್ತ ವಿಷಯಗಳನ್ನೂ ನಿರ್ಧಾರಣ ಮಾಡುತ್ತಿದ್ದವನು ರಾಜನೀಗ. ಪಾಶ್ಚಾತ್ಯ ದೇಶದಲ್ಲೋ ಪ್ರಜೆಗಳೇ ಎಲ್ಲಕ್ಕೂ ಕಾರಣರು.

ಈಗಾದರೋ ಸಾಮಾಜಿಕ ವಿಷಯವಾವುದಕ್ಕೂ ತನ್ನ ಕೈ ಹಾಕು ವುದಿಲ್ಲ ರಾಜನಾದವನು. ಭಾರತೀಯ ಪ್ರಜೆಗಳಲ್ಲಿ ಆತ್ಮನಿರ್ಭರವು ದೂ ರವಾಗಿ ಬಿಟ್ಟಿರುವುದು. ಅಣು ಮಾತ್ರವೂ ಇಲ್ಲ ಆತ್ಮಪ್ರತ್ಯಯವೆಂಬುದು. ಆತ್ಮಪ್ರತ್ಯಯವೇ ವೇದಾಂತದ ಭಿತ್ತಿ. ಅದು ವ್ಯವಹಾರದಲ್ಲಿ ಇನ್ನೂ ಕೊಂಚವೂ ಪರಿಣಾಮ ಹೊಂದಿಲ್ಲ. ಇದಕ್ಕಾಗಿಯೇ ಪಾಶ್ಚಾತ್ಯ ಪ್ರಣಾಳಿ ಎಂದರೆ, ಮೊದಲು ಉದ್ದಿಷ್ಟ ವಿಷಯವಿಚಾರ, ತರುವಾಯ ಸಕಲರೂ ಸೇರಿ ಕರ್ತವ್ಯಸಾಧನ–ಇದು ಈ ದೇಶದಲ್ಲಿ ಫಲಕಾರಿಯಾಗಿಲ್ಲ. ಆದುದರಿಂದಲೇ ನಾವು ಪರಜಾತೀಯ ರಾಜರ ಅಧೀನದಲ್ಲಿದ್ದುಕೊಂಡು ಅಷ್ಟು ಅಧಿಕ ಸ್ಥಿತಿ ಶೀಲರೆಂಬ ಪ್ರತೀತಿ ಹುಟ್ಟಿರುವುದು. ಇದು ಸತ್ಯ

ವಾಗಿದ್ದಲ್ಲಿ ಜನರ ವಿಚಾರ ದ್ವಾರಾ ಯಾವ ಮಹಾ ಕಾರ್ಯ ಸಾಧನೆ ಚೇಷ್ಟೆಯೂ ವ್ಯರ್ಥ. ''ತಲೆ ಇದ್ದರೆ ತಾನೆ ತಲೆ ನೋವು!'' ಸಾಮಾನ್ಯರೆಲ್ಲಿ! ಇದಕ್ಕೆ ಮೇಲೆ ನಾವು ಎಷ್ಟು ವೀರ್ಯಹೀನರಾಗಿಬಿಟ್ಟಿದ್ದೇವೆಂದರೆ ವಿಷಯವಾವುದನ್ನಾದರೂ ತರ್ಕಿಸುವುದಕ್ಕೆ ಹೊರಟರೆ ಅದರಲ್ಲೇ ನಮ್ಮ ಬಲವೆಲ್ಲಾ ನಿಶ್ಶೇಷವಾಗಿ ಖರ್ಚಾಗಿ ಮುಂದೆ ಕಾರ್ಯಮಾಡಲೇನೂ ಉಳಿಯದು. ಇದರಿಂದಲೇ ನಮ್ಮ ವಂಗ ಭೂಮಿಯಲ್ಲಿ ''ಬಹ್ವಾರಂಭೇ ಲಘುಕ್ರಿಯಾ'' ಎಂಬುದು ಯಾವಾಗಲೂ ನಮ್ಮ ಅನುಭವ. ಎರಡನೆಯದೇನೆಂದರೆ, ನಾನು ತಮಗೆ ಹಿಂದೆ ಬರೆದಂತೆ ಭಾರತ ಭೂಮಿಯ ಧನಿಕರಮೇಲೆ ನನಗಾವ ಆಸೆಯೂ ಇಲ್ಲ. ಮತ್ಯಾರ ಮೇಲೆ ಆಸೆ ಎಂದರೆ ಯುವಕಗಣದ ಮೇಲೆ. ಧೀರವಾಗಿಯೂ ಸ್ಥಿರವಾಗಿಯೂ ಇನ್ನು ಸದ್ದಿಲ್ಲದೆಯೂ ಅವರಲ್ಲಿ ಕಾರ್ಯ ನಡೆಯಿಸುವುದು ಒಳ್ಳೆಯದು.

ಶಿಕ್ಷೆ, ಸಭ್ಯತೆ ಮೊದಲಾದುವು ಮೇಲು ಜಾತಿಯವರಿಂದ ಕೀಳು ಜಾತಿಯವರಲ್ಲಿ ಹರಡುವುದಕ್ಕೆಂದು ಮೊದಲಾಯಿತೋ ಅಂದಿನಿಂದ ಪಾಶ್ಚಾತ್ಯದೇಶದ ಆಧುನಿಕ ಸಭ್ಯತೆಗೂ, ''ಭಾರತ, ಈಜಿಪ್ಟ್, ರೋಮಕ ಮುಂತಾದ ದೇಶಗಳ'' ಪ್ರಾಚೀನ ಸಭ್ಯತೆಗೂ ಭೇದವಾರಂಭವಾಯಿತು. ಯಾವ ಜಾತಿಯ (ಜನಾಂಗದ) ಜನಸಮುದಾಯದಲ್ಲಿ ವಿದ್ಯಾಬುದ್ಧಿಗಳು ಎಷ್ಟು ಮಟ್ಟಿಗೆ ಪ್ರಚಾರಗೊಂಡಿರುವವೋ ಅಷ್ಟು ಮಟ್ಟಿಗೆ ಆ ಜಾತಿ ಉನ್ನತಿ ಪಡೆದಿರುವುದನ್ನು ನಾನು ನೋಡಿದ್ದೇನೆ ಪ್ರತ್ಯಕ್ಷವಾಗಿ. ಭಾರತ ವರ್ಷದ ಸರ್ವನಾಶಕ್ಕೆ ದೇಶೀಯ ಸಮಗ್ರ ವಿದ್ಯಾಬುದ್ಧಿಗಳು ಒಂದು ಹಿಡಿ ಜನರಲ್ಲಿ ರಾಜ ಶಾಸನದಿಂದಲೂ ದಂಭ ಬಲದಿಂದಲೂ ಸ್ವಾಯತ್ತೀಕೃತವಾದುದೇ ಮೂಲಕಾರಣ. ನಾವು ಮರಳಿ ಮೇಲಕ್ಕೇಳಬೇಕಾದರೆ ಈ ಮಾರ್ಗವನ್ನೇ ಹಿಡಿಯಬೇಕು. ಎಂದರೆ, ಸಾಮಾನ್ಯರಲ್ಲಿ ವಿದ್ಯೆಯನ್ನು ಹರಡಬೇಕು. ಕಳೆದ ಅರ್ಧ ಶತಾಬ್ದದಿಂದ ಸಮಾಜ ಸಂಸ್ಕಾರ ಗಲಭೆಯು ಎದ್ದಿರುವುದು. ಭಾರತ ವರ್ಷದ ನಾನಾ ಸ್ಥಳಗಳಲ್ಲಿ ಕಳೆದ ಹತ್ತುವರುಷಗಳು ಸಂಚಾರಮಾಡಿದ್ದರಲ್ಲಿ ನನ್ನ ಕಣ್ಣುಗಳಿಗೆ ಬಿದ್ದುದೇನು? ದೇಶದ ತುಂಬ ಸಂಸ್ಕಾರಕ ಸಭೆಗಳು. ಆದರೂ

ಯಾರ ರಕ್ತವನ್ನು ಹೀರಿ "ದೊಡ್ಡವರೆಂಬ" ಪ್ರಸಿದ್ಧನಾಮದಿಂದ ದೊಡ್ಡವರಾಗಿ ನಿಂತಿದ್ದಾರೋ ಅಂತಹವರ ಸಭೆಯೊಂದೂ ನನ್ನ ಕಣ್ಣಿಗೆ ಬೀಳಲಿಲ್ಲ. ಮುಸಲ್ಮಾನರು ತಮ್ಮೊಡನೆ ಕರೆತಂದ ಶಿಪಾಯಿಗಳೆಷ್ಟು ಮಂದಿ! ಈಗಿರುವ ಇಂಗ್ಲೀಜಿ ಜನರೆಷ್ಟುಮಂದಿ! ಆರು ರೂಪಾಯಿಗಳಿಗಾಗಿ ಹೆತ್ತ ತಂದೆ ಅಣ್ಣ ತಮ್ಮಂದಿರ ಕುತ್ತಿಗೆಗಳನ್ನು ಕೊಯ್ಯತಕ್ಕ ಲಕ್ಷೋಪಲಕ್ಷ ಜನರು ಭಾರತ ದೇಶವನ್ನುಳಿದು ಇನ್ನೆಲ್ಲಿ ಸಿಕ್ಕಾರು? ಏಳುನೂರು ಅಬ್ದಗಳ ಮುಸಲ್ಮಾನರ ದವಲತ್ತಿನಲ್ಲಿ ಆರುಕೋಟಿ ಮುಹಮ್ಮದೀಯರು! ನೂರುವರ್ಷ ಕಿರಸ್ತಾನರ ಪ್ರಭುತ್ವದಲ್ಲಿ ಇಪ್ಪತ್ತುಲಕ್ಷ ಕಿರಸ್ತಾನರು!! ಇದಾದುದು ಹೇಗೆ? ಕಲ್ಪನಾಶಕ್ತಿ (Originality) ದೇಶವನ್ನೇ ಬಿಟ್ಟು ಓಡಿಹೋಗಿರುವದೇಕೆ? ನಮ್ಮ ದೇಶದ ಹಸ್ತಚಾತುರ್ಯವುಳ್ಳ ಶಿಲ್ಪಿಗಳು ಯುರೋಪಿಯನರ ಪೋಟಿಗೆ ನಿಲ್ಲಲಾರದೆ ದಿನೇ ದಿನೇ ಅಡಿಗಿಹೋಗುವರೇಕೆ! ಜರ್ಮನಿ ದೇಶದ ಶ್ರಮ ಜೀವಿಗಳು ಇಂಗ್ಲೀಜಿ ಶ್ರಮಜೀವಿಗಳ ಶತಮಾನಗಳಿಂದ ಭದ್ರವಾದ ಆಸನಗಳನ್ನು ಕದಲಿಸಲು ಶಕ್ತರಾದುದು ಹೇಗೆ?

ಶಿಕ್ಷೆ ಶಿಕ್ಷೆ ಶಿಕ್ಷೆಯೊಂದೇ ಕಾರಣ. ಯುರೋಪಿನ ಅನೇಕ ನಗರಗಳಲ್ಲಿ ತಿರುಗಿ ಅಲ್ಲಿಯ ಬಡವರಲ್ಲಿಕೂಡ ಇರುವ ನೆಮ್ಮದಿ ವಿದ್ಯೆಗಳನ್ನು ನೋಡಲು ನಮ್ಮ ಬಡವರ ಅವಸ್ಥೆ ನೆನಪಿಗೆ ಬಂದು ಕಣ್ಣೀರನ್ನು ಸುರಿಸಿದೆನು ನಾನು. ಈ ವ್ಯತ್ಯಾಸಕ್ಕೆ ಕಾರಣವೇನು? ಶಿಕ್ಷೆ—ಇದೇ ಉತ್ತರ. ಶಿಕ್ಷಾಬಲದಿಂದಲೂ ಆತ್ಮಪ್ರತ್ಯಯ ಬಲದಿಂದಲೂ, ಅವರಲ್ಲಡಗಿರುವ ಬ್ರಹ್ಮನು ಜಾಗ್ರತೆಗೊಂಡು ಏಳುತ್ತಿರುವುದು. ನಮ್ಮಲ್ಲಾದರೋ ಕುಗ್ಗುತ್ತಿರುವುದು ಕ್ರಮವಾಗಿ.

ನ್ಯೂಯಾರ್ಕಿಗೆ ಬರುವ ಐರ್‌ಲಾಂಡ್ ದೇಶ ಭ್ರಷ್ಟರ (Irish Colonists) ಅವಸ್ಥೆಯನ್ನು ನೋಡಿದ್ದೇನೆ ನಾನು. ಆಂಗ್ಲೇಯರ ಅಡಿಗಳಿಂದ ತುಳಿಯಲ್ಪಟ್ಟು ಇದ್ದುದನ್ನೆಲ್ಲಾ ಕಳೆದುಕೊಂಡು, ನಷ್ಟಶ್ರೀಯುತರಾಗಿ, ಮಹಾ ದಾರಿದ್ರ್ಯಪೀಡಿತರಾಗಿ ಮಹಾ ಮೂರ್ಖರಾಗಿ ಕೈಯಲ್ಲೊಂದು ಲಟ್ಠಿ, ಅದರ ತುದಿಗೆ ನೇತುಬಿದ್ದಿರುವ ಚಿಂದಿ ಬೊಂತೆಯೊಂದು ಇದೇ ಅವರ ಸರ್ವಸ್ವ. ಅಂಜಿಕೆ ಹೆಜ್ಜೆ, ಗಾಬರಿಗಣ್ಣು. ಆರು

ತಿಂಗಳವೊಳಗೆ ಅವರ ನೋಟವೇ ಬೇರೆ. ನೆಟ್ಟನೆ ನಡೆ, ಬೇರೆ ವೇಷ, ಭಯಭಾವ ತೊಲಗಿದ ಕಣ್ಣು, ಹೆಜ್ಜೆ. ಇದರ ಕಾರಣವೇನು ? ಹೇಳುತ್ತದೆ ನಮ್ಮ ವೇದಾಂತ. ಆ ಐರಿಷನು (Irishman) ತನ್ನ ದೇಶದಲ್ಲಿ ನಾಲ್ಕುಕಡೆಯಲ್ಲಿಯೂ ತಿರಸ್ಕೃತನಾಗಿದ್ದನು. ಸಮಸ್ತ ಪ್ರಕೃತಿಯೇ ಏಕಕಂಠದಿಂದ "ಎಲಾ ಪ್ಯಾಟ್ (Pat) (ಎಂದರೆ ಐರ್‌ಲಂಡಿನವನೇ) ನಿನಗೇನು ಆಶೆಯಿಲ್ಲ. ನೀನು ಗುಲಾಮನಾಗಿ ಹುಟ್ಟಿದೆ. ಹಾಗೆಯೇ ಇರುವೆ" ಎಂದು ಹೇಳುತ್ತಿತ್ತು. ಹುಟ್ಟಿದ ಮೊದಲು ಈ ಪ್ರಕಾರ ಕೇಳಿ ಕೇಳಿ ಅವನು ಅದೂ ನಿಜವೆಂದು ನಂಬಿ ತಾನು ಬಲುಕೀಳನೆಂದು ತನ್ನನ್ನು ತಾನೇ ಮಂಕು (hypnotise) ಮಾಡಿಕೊಂಡುದರಿಂದ ಆತನಲ್ಲಿಯ ಬ್ರಹ್ಮವು ಕುಗ್ಗಿಹೋಯಿತು. ಆದರೆ ಅಮೆರಿಕದಲ್ಲಿ ಕಾಲಿಟ್ಟುದೇ ತಡ, ನಾಲ್ಕುಕಡೆಯಿಂದ ಹೊರಟಿತೀಪರಿಯ ಕೂಗು. "ಪಾಟ್! (Pat) ನೀನೂ ಮನುಷ್ಯ; ನಾನೂ ಮನುಷ್ಯ; ಎಲ್ಲವನ್ನೂ ಮಾಡಿರುವವ ಮನುಷ್ಯ. ನಿನ್ನಂತಹ ನನ್ನಂತಹ ಮನುಷ್ಯ ಮಾಡಬಲ್ಲ ಸಕಲವನ್ನು, ಧೈರ್ಯಗೊಳ್ಳು." ಆಗ 'ಪಾಟ್' ತಲೆಯೆತ್ತಿನೋಡಲು ಅದು ಹಾಗೆಯೇ ಇದ್ದಿತು. ಒಳಗಿನ ಬ್ರಹ್ಮವು ಜಾಗ್ರತೆಗೊಂಡು ಪ್ರಕೃತಿಯೇ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ" (ಕಠೋಪನಿಷತ್) ಎಂದು ಘೋಷಿಸುವಂತಿದ್ದಿತು.

ಇದರಂತೆಯೇ ನಮ್ಮ ಬಾಲಕರ ವಿದ್ಯಾಶಿಕ್ಷೆಯು ಅನಸ್ತಿಭಾವ ಪೂರ್ಣ (Negation). ಸ್ಕೂಲು ಹುಡುಗ ಏನನ್ನೂ ಕಲಿತುಕೊಳ್ಳುವುದಿಲ್ಲ. ತನ್ನದೆಂಬದೇನಿರುವುದೋ ಅದೆಲ್ಲಾ ಒಡೆದು ಚೂರು ಚೂರಾಗುತ್ತದೆ. ಇದರ ಫಲವೇನು! "ಶ್ರದ್ಧಾಹೀನತ್ವ." ಈ ಶ್ರದ್ಧೆಯೇ ವೇದ ವೇದಾಂತದ ಮೂಲ ಮಂತ್ರ. ಈ ಶ್ರದ್ಧೆಯಿಂದಲೇ ನಾಚಿಕೇತನು ಯಮನೆಡೆಗೆ ಹೋಗಿ ಅವನನ್ನು ಪ್ರಶ್ನೆಮಾಡಲು ಸಾಹಸಿಯಾದುದು. ಈ ಶ್ರದ್ಧಾಬಲದಿಂದಲೇ ಚಲಿಸುವುದೀ ಜಗತ್ತು. ಇಂತಹ ಶ್ರದ್ಧೆಯ ಲೋಪ. "ಅಜ್ಞಶ್ಚ ಅಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ" (ಅಜ್ಞನೂ ಶ್ರದ್ಧಾಹೀನನೂ ಸಂಶಯಾತ್ಮನೂ ನಾಶಹೊಂದುತ್ತಾನೆ); ಅದುದರಿಂ

ದಶೇ ನಮಗೂ ವಿನಾಶಕ್ಕೂ ಅಷ್ಟು ಸಮೀಪ. ಉಪಾಯವಾವುದೀಗ? ಶಿಕ್ಷಾಪ್ರಚಾರ. ಮೊದಲು ಆತ್ಮವಿದ್ಯೆ. ಹೀಗೆಂದರೆ, ಜಟೆ, ದಂಡ, ಕಮಂಡಲು, ಗಿರಿಗುಹೆಗಳು ಮನಸ್ಸಿಗೆ ಬರುತ್ತವೆಯಲ್ಲವೆ! ನನ್ನ ಮನಸ್ಸಿನಲ್ಲಿರುವುದದಲ್ಲ. ಆದರೆ ಅದೇನು? ಯಾವ ಜ್ಞಾನದ ದ್ವಾರಾ ಭವಬಾಧನದಿಂದ ಮುಕ್ತಿಯುಂಟಾಗುತ್ತದೋ ಅದರಿಂದ ಸಾಮಾನ್ಯ ವೈಷಯಿಕೋನ್ನತಿ ಉಂಟಾಗಲಾರದೇನು! ಅವಶ್ಯವಾಗಿ ಆಗುತ್ತದೆ. ಮುಕ್ತಿ, ವೈರಾಗ್ಯ, ತ್ಯಾಗ ಇವೆಲ್ಲವೂ ಮಹಾಶ್ರೇಷ್ಠವಾದ ಆದರ್ಶ, ಆದರೆ "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೆ ಮಹತೋಭಯಾತ್"—ಈ ಧರ್ಮದ ಅಲ್ಪಾಂಶ ಕೂಡ ಆ ಮಹಾಭಯದಿಂದ (ಜರಾಮರಣ) ನಿವಾರಣೆಮಾಡುತ್ತದೆ.

ದ್ವೈತ ವಿಶಿಷ್ಟಾದ್ವೈತ ಅದ್ವೈತ ಶೈವ ಸಿದ್ಧಾಂತ ವೈಷ್ಣವ ಶಾಕ್ತ ಇನ್ನೂ ಬೌದ್ಧ ಜೈನ ಮೊದಲಾದ ಸಂಪ್ರದಾಯಗಳಾವಾವುವು ಭಾರತ ಭೂಮಿಯಲ್ಲಿ ಹುಟ್ಟಿವೆಯೋ ಅವೆಲ್ಲವೂ ಈ ವಿಷಯದಲ್ಲಿ ಏಕವಾಕ್ಯದಿಂದ ಹೇಳುವುದೇನೆಂದರೆ ಈ ಜೀವಾತ್ಮನಲ್ಲಿಯೇ ಅಡಗಿರುವುದನಂತ ಶಕ್ತಿ. ಇರುವೆ ಮೊದಲು ಉಚ್ಚತರ ಸಿದ್ಧಪುರುಷಪರ್ಯಂತ ಸಕಲದಲ್ಲಿಯೂ ಇರುವುದೀ ಆತ್ಮನೇ. ವ್ಯತ್ಯಾಸವೇನಂದರೆ ಕೇವಲ ಪ್ರಕಾಶ ತಾರತಮ್ಯ, "ವರ್ಣಭೇದಸ್ತು ತತಃ ಕ್ಷೇತ್ರಿಕವತ್" (ಪತಂಜಲಿಯ ಯೋಗ ಸೂತ್ರ). ರಯಿತನು ನೀರು ಹರಿಯುವ ದಾರಿಯನ್ನು ಬಿಡಿಸುವಂತೆ. ಅವಕಾಶ, ಉಪಯುಕ್ತ ದೇಶ ಕಾಲ, ಎಂದು ಎಲ್ಲಿ ಸಿಕ್ಕುವುವೋ ಆಗ ೬ ಶಕ್ತಿಯ ವಿಕಾಸ. ವಿಕಾಸವಾಗಲಿ, ಆಗದೇ ಹೋಗಲಿ ಆ ಶಕ್ತಿಯೇ ಆಬ್ರಹ್ಮಸ್ತಂಬ ಪರ್ಯಂತ ಅಡಗಿರುವುದೆಲ್ಲದರಲ್ಲಿಯೂ. ಬಾಗಿಲು ಬಾಗಿಲು ತಿರುಗಿ ಈ ಶಕ್ತಿಯನ್ನು ಜಾಗ್ರತೆಗೊಳಿಸಬೇಕು.

ಎರಡನೆಯದು, ಇದರೊಡನೆ ವಿದ್ಯಾಶಿಕ್ಷೆಯ ಪ್ರಚಾರವೂ ಜರುಗಬೇಕು. ಹೇಳುವದೇನೋ ಸುಲಭ. ಆದರೆ ಇದನ್ನು ಕಾರ್ಯದಲ್ಲಿ ತೋರಿಸುವ ಬಗೆ ಹೇಗೆ! ಸಾವಿರಾರು ಮಂದಿ ನಿಸ್ವಾರ್ಥತ್ಯಾಗಿಗಳಿರುವರೀ ನಮ್ಮ ದೇಶದಲ್ಲಿ. ಫಲಾಪೇಕ್ಷೆಯಿಲ್ಲದೆ ಇವರು ಧರ್ಮಶಿಕ್ಷೆಯನ್ನು ಕೊಡುತ ಪರ್ಯಟನಮಾಡುವರು. ಇವರಲ್ಲಿ ಅರ್ಧಭಾಗ

ವಿಷ್ಯಾಶಿಕ್ಷೆ ಕೊಡುವಂತೆ ಮಾಡಬೇಕು. ಅದಕ್ಕಾಗಿ ನಮ್ಮ ದೇಶದ ಮುಖ್ಯ ಪ್ರಾಂತಗಳ ಪ್ರತಿಯೊಂದು ರಾಜಧಾನಿಯೂ ಒಂದೊಂದು ಕೇಂದ್ರವಾಗಿ ಅಲ್ಲಿಂದ ಭಾರತದ ಎಲ್ಲಾ ಭಾಗಕ್ಕೂ ಮೆಲ್ಲನೆ ಹರಡಬೇಕು. ಮದ್ರಾಸಿನಲ್ಲಿಯೂ ಕಲ್ಕತ್ತೆಯಲ್ಲಿಯೂ ಎರಡು ಕೇಂದ್ರಗಳು ಈಗಾಗಲೇ ಸ್ಥಾಪಿತವಾಗಿವೆ. ಶೀಘ್ರದಲ್ಲಿಯೇ ಇನ್ನೂ ಕೆಲವು ಆಗುವ ಆಸೆ ಇದೆ. ಆಮೇಲೆ ಬಡವರ ಶಿಕ್ಷೆಯು ಬಹಳ ಮಟ್ಟಿಗೆ ಶ್ರುತಿಯ ದ್ವಾರಾ ಎಂದರೆ ಬಾಯಿ ಮಾತಿನಲ್ಲಿ ಜರುಗಬೇಕು. ಶಾಲಾ ಸ್ಥಾಪನಕ್ಕೆ ಸಮಯ ಬಂದಿಲ್ಲ ಇನ್ನೂ. ಈ ಪ್ರಧಾನ ಕೇಂದ್ರಗಳಲ್ಲಿ ಕೃಷಿ, ವಾಣಿಜ್ಯ ಇತ್ಯಾದಿಗಳಲ್ಲಿ ಶಿಕ್ಷೆಯು ಕ್ರಮವಾಗಿ ಕೊಡಲಾಗುವುದು. ಇನ್ನೂ ಈ ದೇಶೋನ್ನತಿಗೆ ಕಾರಣವಾದ ಶಿಲ್ಪಾದಿಗಳ ಕರ್ಮಶಾಲೆಗಳೂ ಸ್ಥಾಪನೆಯಾಗಬೇಕು. ಈ ಕರ್ಮಶಾಲೆಗಳಲ್ಲಿ ತಯಾರಾಗುವ ಸರಕುಗಳನ್ನು ಯೂರೋಪ್ ಅಮೆರಿಕ ದೇಶಗಳಲ್ಲಿ ವಿಕ್ರಯಮಾಡುವುದಕ್ಕಾಗಿ ಸಭೆಗಳು ಸ್ಥಾಪನೆಯಾಗಬೇಕು ಈಗಾಗಲೇ ಇರುವುವುಗಳಂತೆ. ಪುರುಷರಂತೆ ಸ್ತ್ರೀಯರಿಗೂ ಕೇಂದ್ರಸ್ಥಾನವೊಂದು ಆವಶ್ಯಕವು. ಆದರೆ ಈ ದೇಶದಲ್ಲಿ ಅದು ಅತೀವ ಕಠಿನವೆಂಬುದು ತಮಗೆ ವೇದ್ಯ. ಇದಲ್ಲದೆ ಈ ಸಮಸ್ತ ಕಾರ್ಯಕ್ಕಾಗಿ ಬೇಕಾದ ಹಣವು ಇಂಗ್ಲಾಂಡಿನಿಂದ ಬರಬೇಕಾಗಿರುವುದು. 'ಕಚ್ಚುವ ಸರ್ಪವು ತನ್ನ ವಿಷವನ್ನೇ ವೆಚ್ಚಮಾಡಬೇಕು' ಇದು ನನ್ನ ದೃಢವಾದ ನಂಬಿಕೆ. ಆದಕಾರಣ, ನಮ್ಮ ಧರ್ಮವು ಪ್ರಚಾರವಾಗಬೇಕು ಯೂರೋಪು ಅಮೆರಿಕ ದೇಶಗಳಲ್ಲಿ. ಆಧುನಿಕ ವಿಜ್ಞಾನವು ಕ್ರೈಸ್ತ ಧರ್ಮದ ಭಿತ್ತಿಯನ್ನು ಒಡೆದು ಪುಡಿ ಪುಡಿಮಾಡಿರುವುದು. ಇದಕ್ಕೆ ಮೇಲೆ ವಿಲಾಸ (ವಿಷಯಭೋಗೇಚ್ಛೆ) ಧರ್ಮವೃತ್ತಿಯನ್ನೇ ನಷ್ಟಗೊಳಿಸುವಂತಿದೆ. ಯೂರೋಪ್ ಅಮೆರಿಕ ದೇಶಗಳು ಆಶಾಪೂರ್ಣದೃಷ್ಟಿಯಿಂದ ಭಾರತ ವರ್ಷದ ಕಡೆ ನೋಡುತ್ತಿವೆ. ಪರೋಪಕಾರಕ್ಕೆ ಇದೀಗ ಸಮಯ. ವೈರಿ ದುರ್ಗವನ್ನಾಕ್ರಮಿಸಲು ಇದೇ ಸಮಯ.

ಪಾಶ್ಚಾತ್ಯ ದೇಶದಲ್ಲಿ ಸ್ತ್ರೀರಾಜ್ಯ. ಅಲ್ಲಿ ಸ್ತ್ರೀಬಲ, ಸ್ತ್ರೀ ಪ್ರಭುತ್ವ. ತಮ್ಮಂತಹ ವೇದಾಂತ ತತ್ವಜ್ಞಳೂ, ತೇಜಸ್ವಿನಿಯೂ, ವಿದುಷಿಯೂ

ಆದ ಸ್ತ್ರೀಯರೋರ್ವರಳು ಈ ಸಮಯದಲ್ಲಿ ಇಂಗ್ಲಾಂಡಿಗೆ ಹೋಗಿ, ಧರ್ಮ ಪ್ರಚಾರಮಾಡಿದಲ್ಲಿ ನಾನು ನಿಶ್ಚಯವಾಗಿ ಹೇಳುತ್ತೇನೆ ಪ್ರತಿವರ್ಷವೂ ಸಾವಿರಾರು ನರ ನಾರಿಯರು ಕೃತಾರ್ಥರಾಗುವರು ಭಾರತಧರ್ಮವನ್ನವಲಂಬಿಸಿ. ನಮ್ಮ ದೇಶದಿಂದ ಹೊರಗೆ ಹೋದ ಸ್ತ್ರೀ ರಮಾಬಾಯಿಯೊಬ್ಬಳೇ. ಆಕೆಯ ಇಂಗ್ಲೀಷು ಭಾಷಾ ಜ್ಞಾನವೂ ಪಾಶ್ಚಾತ್ಯ ವಿಜ್ಞಾನ ಶಿಲ್ಪಾದಿ ಜ್ಞಾನವೂ ಅಲ್ಪ. ಆದರೂ ಸಕಲರನ್ನೂ ಬೆರಗುಮಾಡಿದಳಾಕೆ. ತಮ್ಮಂತಹ ಸ್ತ್ರೀ ಹೋದ ಪಕ್ಷದಲ್ಲಿ ಕದಲಿಹೋಗುವದು ಇಂಗ್ಲಾಂಡ್. ಇನ್ನು ಅಮೆರಿಕದ ಮಾತೇನು ? ದೇಶೀಯ ನಾರಿಯು ದೇಶೀಯ ವಸ್ತ್ರವನ್ನುಟ್ಟು ಭಾರತ ಋಷಿಮುಖಾಗತ ಧರ್ಮವನ್ನು ಪ್ರಚಾರಮಾಡಿದರೆ ನನ್ನ ದಿವ್ಯ ಚಕ್ಷುಸ್ಸಿನಿಂದ ನೋಡುತ್ತೇನೆ, ದೊಡ್ಡದೊಂದು ತರಂಗವೆದ್ದು ಸಮಸ್ತ ಪಾಶ್ಚಾತ್ಯಭೂಮಿಯ ಮೇಲೆ ಹರಿದು ಮುಳುಗಿಸುವುದದನ್ನು. ಮೈತ್ರೇಯಿ, ಖನಾ, ಲೀಲಾವತೀ, ಸಾವಿತ್ರೀ, ಉಭಯ ಭಾರತೀ ಇವರ ಜನ್ಮಸ್ಥಾನವಾದೀ ದೇಶದಲ್ಲಿ ಯಾವ ನಾರೀಯೂ ಈ ಸಾಹಸ ಕಾರ್ಯವನ್ನು ಮಾಡಳೇನು ! ಇದು ಈಶ್ವರನಿಗೇ ಗೊತ್ತು. ಇಂಗ್ಲೆಂಡ್ ಇಂಗ್ಲೆಂಡ್ ಇಂಗ್ಲೆಂಡನ್ನು ನಮ್ಮ ಧರ್ಮಬಲದಿಂದ ಗೆಲ್ಲುವೆವು ನಾವು. ಅಲ್ಲಿ ಅಧಿಕಾರ ನಡಿಸುವೆವು. "ನಾನ್ಯಃ ಪಂಥಾ ವಿದ್ಯತೇಯನಾಯ." (ಬೇರೆ ಉಪಾಯವಿಲ್ಲ ಮುಕ್ತಿಗೆ.) ಈ ದುರ್ದಾನ್ತರ ಹಸ್ತದಿಂದ ಸಭಾ ಸಮಿತಿಗಳ ದ್ವಾರಾ ಬಿಡುಗಡೆ ಆದೀತೇನು ! ಅವರು ದೇವತೆಗಳಾಗಬೇಕು. ನಾನೇನು ! ದೀನ ಭಿಕ್ಷುಕ, ಪರಿವ್ರಾಜಕ, ಏಕಾಂಗಿ ನಾನು. ಅಸಹಾಯಕನು ನಾನು ! ಧನಬಲ ಬುದ್ಧಿಬಲ ವಿದ್ಯಾಬಲ ಇವೆಲ್ಲವೂ ತಮ್ಮವು. ಇಂತಹ ಸುಯೋಗವನ್ನು ಬಿಟ್ಟು ಬಿಡುವದೇನು ತಾವು ! ಇಂಗ್ಲೆಂಡನ್ನು ಜಯಿಸಬೇಕು, ಯೂರೋಪನ್ನು ಜಯಿಸಬೇಕು, ಅಮೆರಿಕವನ್ನು ಜಯಿಸಬೇಕು. ಇದೀಗ ನಮ್ಮ ಮಂತ್ರ. ಇದರಿಂದ ನಮ್ಮ ದೇಶಕ್ಕೆ ಕಲ್ಯಾಣ. (Expansion is the sign of life and we must spread the world over with spiritual ideals), ಪರ್ಬುಗುತರ್ಮ ಜೀವನಕ್ಕೆ. ಆಧ್ಯಾತ್ಮಿಕಾದರ್ಶವನ್ನು ಈ ಜಗತ್ತಿನಲ್ಲೆಲ್ಲಾ ಪ್ರಚಾರಗೊಳಿಸ

ಬೇಕು ನಾವು. ಅಯ್ಯೋ! ಕ್ಷುದ್ರವೀಶರೀರ, ಸಾಲದುದಕ್ಕೆ ಬಂಗಾಳೀ ಶರೀರ! ಈ ದುಡಿತದಿಂದ ಕಠಿನವಾದ ಪ್ರಾಣಹರ ವ್ಯಾಧಿಗೆ ಈಡಾಗಿರುವುದೀ ವೈ್ಯ. ಆದರೂ ಆಸೆ.

ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನ ಧರ್ಮಾ ।
ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ॥

(ಭವಭೂತಿ)

ನನಗೆ ಸಮಾನಧರ್ಮವುಳ್ಳ ಅನ್ಯವ್ಯಕ್ತಿ ಯಾವನೋ ಹುಟ್ಟಿದ್ದಾನೆ. ಅಲ್ಲವೆ ಹುಟ್ಟುತ್ತಾನೆ. ಏಕೆಂದರೆ ಕಾಲ ಅನಂತವಾದುದು, ಪೃಥ್ವಿಯಾದರೋ ವಿಸ್ತಾರವಾದುದು.

ಸಸ್ಯಾಹಾರ ವಿಷಯದಲ್ಲಿ ನಾನು ಹೇಳತಕ್ಕುದಿದು. ಮೊದಲು ಸಸ್ಯಾಹಾರಿಯಾಗಿದ್ದರು ನನ್ನ ಗುರು. ದೇವಿಯ ಮಾಂಸಪ್ರಸಾದವನ್ನಾರಾದರೂ ತಂದುಕೊಟ್ಟರೆ ಅದನ್ನು ಕೈಯ್ಯಲ್ಲೆತ್ತಿಕೊಂಡು ತನ್ನ ಶಿರಕ್ಕೆ ಸ್ಪರ್ಶಮಾಡುವರು. ಜೀವಹತ್ಯವೇನೋ ಪಾಪ. ಅದರಲ್ಲಿ ಸಂಶಯವೇ ಇಲ್ಲ. ರಾಸಾಯನಿಕ ವಿಜ್ಞಾನೋನ್ನತಿಯ ದ್ವಾರಾ ಸಸ್ಯವು ಮಾನುಷ ಶರೀರಕ್ಕೆ ಉಪಯೋಗವಾಗುವ ಆಹಾರವಾಗುವ ವರೆಗೆ ಮಾಂಸ ಭೋಜನ ಬಿಟ್ಟು ಬೇರೆ ಉಪಾಯವಿಲ್ಲ. ಈಗಣ ಆಧುನಿಕ ಅವಸ್ಥೆಯಲ್ಲಿ ರಜೋಗುಣ ಕ್ರಿಯೆಯನ್ನು ಎಷ್ಟುಕಾಲ ಮಾಡಬೇಕಾಗಿರುವುದೋ ಅದುವರೆಗೆ ಮಾಂಸಾಹಾರ ವಿನಾ ಬೇರೆ ಉಪಾಯವಿಲ್ಲ. ಅಶೋಕ ಮಹಾರಾಜನು ತನ್ನ ಖಡ್ಗಬಲದಿಂದ ಎಷ್ಟೋ ಲಕ್ಷ ಪಶುಗಳ ಪ್ರಾಣವನ್ನು ಉಳಿಸಿದುದೇನೋ ನಿಜ. ಆದರೆ ಸಾವಿರಾರು ವರ್ಷಕಾಲ ಗುಲಾಮಗಿರಿಯು ಅದಕ್ಕಿಂತಲೂ ಪಾಪವಲ್ಲವೆ! ಹೆಚ್ಚು ಪಾಪವಾವುದು ? ಇಪ್ಪತ್ತು ಮೇಕೆಗಳನ್ನು ಕೊಲ್ಲುವುದೋ ! ನಮ್ಮ ಹೆಂಡತಿ ಮಗಳ ಮರ್ಯಾದೆ ರಕ್ಷಣೆ ಮಾಡುವುದಕ್ಕೆ ಅಸಮರ್ಥತೆಯೋ! ಉಚ್ಚಶ್ರೇಣಿಯವರಾಗಿ ದೇಹ ಶ್ರಮ ಪಟ್ಟು ಯಾರು ಉದರಪೋಷಣೆ ಮಾಡರೋ

ಅವರು ಮಾಂಸಾಹಾರವನ್ನು ಬಿಡಲಿ. ಆದರೆ ಯಾರು ಹಗಲೂ ಇರುಳೂ ಹಿಟ್ಟು ಬಟ್ಟೆಗಾಗಿ ದುಡಿಯುವರೋ ಅವರನ್ನು ಬಲಾತ್ಕಾರದಿಂದ ಸಸ್ಯಾಹಾರಿಗಳನ್ನಾಗಿ ಮಾಡಿದುದು ನಮ್ಮ ಜಾತಿಯ ಸ್ವಾತಂತ್ರ್ಯವು ನಷ್ಟವಾದುದಕ್ಕೊಂದು ಕಾರಣ. ಉತ್ತಮ ಪುಷ್ಟಿಕರ ಆಹಾರವೇನು ಮಾಡಬಲ್ಲುದೆಂಬುದಕ್ಕೆ ಜಪಾನ್ ದೇಶ ನಿದರ್ಶನ.

ಸರ್ವಶಕ್ತಿಮತೀ ವಿಶ್ವೇಶ್ವರೀ ತಮ್ಮ ಹೃದಯದಲ್ಲಿ ಅವತೀರ್ಣವಾಗಲೀ ಎಂದು ಹಾರೈಸುವ

ವಿವೇಕಾನಂದ.

ಶ್ರೀಮತಿ ಸರಳ ಘೋಷಾಲ್ ಬಿ. ಎ.,
ಅವರಿಗೆ.

ಆಲ್ಮೋರಾ

೧ ನೆಯ ಜೂನ್, ೧೮೯೭.

ಪ್ರಿಯ................,

'ವೇದಗಳು' ಎಂಬ ಪದಕ್ಕೆ 'ಸಂಹಿತೆಗಳು' ಎಂದರ್ಥವಾದರೆ ಪ್ರಬಲವಾಗುವುದು ತಮ್ಮ ಆಕ್ಷೇಪವು. 'ವೇದಗಳು' ಎಂಬ ಪದದಲ್ಲಿ ಸಂಹಿತೆಗಳು ಬ್ರಾಹ್ಮಣಗಳು ಉಪನಿಷತ್ತುಗಳು ಇವು ಮೂರೂ ಸೇರಿವೆ ಎಂಬುದು ಭಾರತ ವರ್ಷದಲ್ಲಿ ಸರ್ವರಿಂದಲೂ ಅಂಗೀಕೃತವಾದ ಮತ. ಇವುಗಳಲ್ಲಿ ಮೊದಲೆರಡು ಭಾಗಗಳು ಕರ್ಮಕಾಂಡಗಳಾಗಿರುವುದರಿಂದ ಅವುಗಳ ಕಡೆ ದೃಷ್ಟಿಯೇ ನಷ್ಟವಾಗಿರುವುದು. ನಮ್ಮ ಸಮಗ್ರ ದಾರ್ಶನಿಕರೂ, ಸಾಂಪ್ರದಾಯಿಕರೂ ಉಪನಿಷತ್ತುಗಳನ್ನೇ ಅವಲಂಬಿಸಿರುವರು.

ಸಂಹಿತೆಗಳು ಮಾತ್ರವೇ ವೇದಗಳೆಂಬ ಮತವು ಕೀರ್ತಿಶೇಷರಾದ ದಯಾನಂದ ಸ್ವಾಮಿಗಳಿಂದ ಹೊರಟುದು. ವೈದಿಕ ಜನರಲ್ಲಿ ಈ ಅಭಿಪ್ರಾಯವು ನೆಲೆಗೊಂಡಿಲ್ಲ. ಸಂಹಿತೆಗಳಿಗೆ ನವೀನ ವ್ಯಾಖ್ಯಾನವನ್ನು

ಕಲ್ಪಿಸಿ ಅದರ ಆಧಾರದಮೇಲೆ ಸಮಂಜಸವಾದ ಸಿದ್ಧಾಂತವನ್ನು ಸ್ಥಾಪನೆ ಮಾಡಲಿಕ್ಕಾಗುವುದೆಂಬುದೇ ಅವರ ಮತಕ್ಕೆ ಕಾರಣ. ಆದರೆ ತೊಂದರೆಗಳೇನೋ ಹಾಗೆಯೇ ಇದ್ದು ಬ್ರಾಹ್ಮಣಗಳ ಮೇಲೆ ಎರಗಿರುವುವು. ನೂತನ ವ್ಯಾಖ್ಯಾನ, ಪ್ರಕ್ಷೇಪ–ಇವುಗಳ ಸಿದ್ಧಾಂತವಿದ್ದರೂ ವಿವಾದಗಳೇನೋ ಉಳಿದಿರುವುವು ಹೆಚ್ಚಾಗಿಯೇ.

ಸಂಹಿತೆಗಳ ಆಧಾರದಮೇಲೆ ಸಮಂಜಸವಾದ ಮತಸ್ಥಾಪನೆ ಮಾಡುವುದು ಸಾಧ್ಯವಾದಲ್ಲಿ ಅತಿ ಸಮಂಜಸವೂ ಪರಸ್ಪರ ವಿರೋಧವಿಲ್ಲದೆಯೂ ಇರುವ ಸಿದ್ಧಾಂತವನ್ನು ಉಪನಿಷದ್ಭಿತ್ತಿಗಳಮೇಲೆ ಸ್ಥಾಪನೆ ಮಾಡಲಿಕ್ಕೆ ಸಾಧ್ಯವೆಂಬುದರಲ್ಲಿ ಸಾವಿರ ಪಾಲು ನಂಬಿಕೆ ಹೆಚ್ಚು. ಇದಲ್ಲದೆ ಇಲ್ಲಿ ಸರ್ವರಿಂದಲೂ ಅಂಗೀಕೃತವಾದ ಮತಕ್ಕೆ ವಿರೋಧವಾಗಿ ಹೋಗಬೇಕಾಗಿಲ್ಲ. ಇನ್ನೂ ಪೂರ್ವಾಚಾರ್ಯರುಗಳ ಮತವೆಲ್ಲವೂ ನಿಮ್ಮ ಪಕ್ಷವೇ ಆಗಿ ನೀವು ಮುಂದೆ ಹೋಗಲು ಅವಕಾಶ ವಿಸ್ತಾರವಾಗುವುದು.

ಈಗಾಗಲೇ ಹಿಂದೂದೇಶದ ಬೈಬಲ್ ಆಗಿ ಪರಿಣಮಿಸಿರುವುದು 'ಗೀತೆ.' ಹೀಗಾಗಲು ಅದು ಸಂಪೂರ್ಣವಾಗಿ ಅರ್ಹವಾದುದೇ ಸರಿ. ಆದರೆ ಶ್ರೀಕೃಷ್ಣನ ವ್ಯಕ್ತಿತ್ವದಮೇಲೆ ಹೆಚ್ಚು ಮಬ್ಬು ಕವಿದು ಈಗಣ ಕಾಲದಲ್ಲಿ ಆ ಚರಿತೆಯಿಂದ ಪ್ರಾಣ ಕಳೆಕೊಡುವ ಸ್ಫೂರ್ತಿಯುಂಟಾಗುವುದಸಾಧ್ಯ. ಇದಲ್ಲದೆ ಈಗಣ ಕಾಲಕ್ಕೆ ನವೀನ ಭಾವ ಮಾರ್ಗಗಳೂ ನವ ಜೀವವೂ ಬೇಕು. ನಾನು ಹೇಳಿರುವುದು ಈ ಮಾರ್ಗಗಳಲ್ಲಿ ನಿಮ್ಮ ಬುದ್ಧಿಯೋಡುವುದಕ್ಕೆ ಸಹಾಯವಾಗುವುದೆಂದು ನಂಬಿರುವ,

ಆಶೀರ್ವಾದಗಳೊಡನೆ,

ವಿವೇಕಾನಂದ

* * * *

ಆಲ್ಮೋರಾ,
೩ ನೆಯ ಜುಲೈ, ೧೮೯೭.

ಓಂ ನಮೋ ಭಗವತೇ ರಾಮಕೃಷ್ಣಾಯ

ಯಸ್ಯ ವೀರ್ಯೇಣ ಕೃತಿನೋ ವಯಂ ಚ ಭುವನಾನಿಚ ।
ರಾಮಕೃಷ್ಣಂ ಸದಾ ವಂದೇ ಶರ್ವಂ ಸ್ವತಂತ್ರಮೀಶ್ವರಂ ॥

ಯಾರ ಶಕ್ತಿಯಿಂದ ನಾವೂ ಸಕಲ ಜಗತ್ತೂ ಕೃತಾರ್ಥರಾಗಿರುವೆವೋ ಆ ಶಿವಸ್ವರೂಪನೂ, ಸ್ವತಂತ್ರನೂ, ಈಶ್ವರನೂ ಆದ ಶ್ರೀ ರಾಮಕೃಷ್ಣನನ್ನು ನಾನು ಸದಾ ವಂದಿಸುತ್ತೇನೆ.

ಎಲೈ ! ಆಯುಷ್ಮನ್, ಶರಚ್ಚಂದ್ರ !

' ಪ್ರಭವತಿ ಭಗವಾನ್ ವಿಧಿಃ ' ವಿಧಾತನು ವಿಧಿಸಿದಂತಾಗುತ್ತದೆಂಬುದು ಕರ್ಮಪಟುಗಳಲ್ಲದ ಶಾಸ್ತ್ರಕಾರರ ಮತ. ಕರ್ಮಕುಶಲರ ಮತವಾದರೋ ಪುರುಷಕಾರವೇ ಎಂದರೆ, ಪುರುಷ ಪ್ರಯತ್ನವೇ ಶ್ರೇಷ್ಠವೆಂಬುದು. ದುಃಖ ನಿವಾರಣೆಗೆ ಪುರುಷಕಾರವೇ ಉಪಾಯವೆಂದು ನಂಬುವವರಿಗೂ, ವಿಧಿಯ (ದೈವದ) ಮೇಲೆ ಭಾರ ಹಾಕುವವರಿಗೂ, ಇರುವ ಕಲಹವು ಅಜ್ಞಾನ ಜನಿತವಾದುದೆಂದರಿತು ನೀನು ಜ್ಞಾನರೂಪ ಗಿರಿಯ ಸರ್ವೋಚ್ಚಶೃಂಗವನ್ನೇರುವ ಪ್ರಯತ್ನವನ್ನೆಸಗು.

' ತತ್ತ್ವ ನಿಕಷ ಗ್ರಾವಾ ವಿಪದ್ ' ಎಂದರೆ ವಿಪತ್ತು ತತ್ತ್ವಜ್ಞಾನದ ಒರೆಗಲ್ಲು. ವಿಪತ್ತೊದಗಿದರೆ ತತ್ತ್ವಜ್ಞಾನಪರೀಕ್ಷೆಯಾಗುತ್ತದೆ. ದುಃಖಗಳೂ ಕಷ್ಟಗಳೂ ತತ್ತ್ವಜ್ಞಾನದ ಒರೆಗಲ್ಲಂತೆ. ' ತತ್ತ್ವಮಸಿ ' ಎಂಬ ಈ ಮಾತನ್ನೇ ತತ್ತ್ವಸಂಬಂಧವಾಗಿ ನೂರುಮಡಿ ಹೇಳಬಹುದು. ಈ ಶಿಕ್ಷಣ ವುಳ್ಳಂಥವನ ಜೀವನ ಉಂಟಲ್ಲಾ ಅದು ಧನ್ಯವಾದುದೇ ಹೌದು. ನಿನಗೆ ರುಚಿಸಲೀ ರುಚಿಸದೆ ಇರಲಿ. 'ಕಾಲ ನಿರೀಕ್ಷಣೆ ಮಾಡಪ್ಪ ' ಎಂಬ ಹಳೇ ಗಾದೆಯನ್ನು ನಾನು ಹೇಳುವುದೇನೋ ನಿಜ.

ದೋಣಿಯನ್ನು ನಡೆಯಿಸಿ ನಡೆಯಿಸಿ ನೀನು ಬಳಲಿರುವೆಯಾದುದರಿಂದ ಈಗ ಹುಟ್ಟಿನ ಮೇಲೆ ಒರಗಿಕೊಂಡು ಭಾರಬಿಟ್ಟು

ಕೊಂಚ ದಣಿ ತೀರಿಸಿಕೊ. ಹಿಂದಣ ವೇಗವೇ ಕರೆಯೇರಿಸುವುದು ದೋಣಿಯನ್ನು. 'ತತ್ ಸ್ವಯಂ ! ಯೋಗ ಸಂಸಿದ್ಧಃ ಕಾಲೇನಾತ್ಮನಿ ವಿಂದತಿ' (ಯೋಗಸಂಸಿದ್ಧಿಯನ್ನು ಪಡೆದು ಕಾಲಾನುಕಾಲಕ್ಕೆ ತನ್ನ ಆತ್ಮನಲ್ಲಿಯೇ ಆತ್ಮಾನುಭವವನ್ನು ಪಡೆಯುತ್ತಾನೆ) ಎಂಬುದು ಗೀತಾ ವಾಕ್ಯ. ,ನ ಧನೇನ ನ ಪ್ರಜಯಾ ತ್ಯಾಗೇ ನೈಕೇನ ಅಮೃತತ್ವಮಾನಶುಃ' ಎಂದು ಉಪನಿಷತ್ತು. ಧನದಿಂದಾಗಲೀ ಸಂತಾನದಿಂದಾಗಲಿ ಅಮೃತತ್ವಲಾಭವಾಗದು. ಆದರೆ ತ್ಯಾಗದ್ವಾರವೇ ಅಮೃತತ್ವ ಲಾಭ. ಇಲ್ಲಿ ತ್ಯಾಗಶಬ್ದದಿಂದ ವೈರಾಗ್ಯವು ಲಕ್ಷ್ಯೀಕೃತವಾಗಿದೆ. ಎರಡು ಬಗೆಯಾಗಿರಹುದು ವೈರಾಗ್ಯ–ಉದ್ದೇಶ ಹೀನ ಉದ್ದೇಶ ಯುಕ್ತ. ಹುಳು ತಿಂದು ಕುಟ್ಟಿ ಹಿಡಿದ ಮೆದುಳಿನವನು ಏನಾ ಮತ್ತಾವನೂ ಮೊದ ನೆಯುದಕ್ಕಾಗಿ ಪ್ರಯತ್ನ ಪಡನು. ಆದರೆ ವೈರಾಗ್ಯವು ಉದ್ದೇಶ ಯುಕ್ತವಾಗಿದ್ದು ಮನಸ್ಸನ್ನು ಇತರ ವಸ್ತುಗಳಮೇಲೆ ಪ್ರವರ್ತಿಸಿದಂತೆ ಮಾಡಿ ಅದನ್ನು ಈಶ್ವರನಲ್ಲಾಗಲೀ ಆತ್ಮನಲ್ಲಾಗಲೀ ಕೇಂದ್ರೀಕರಿಸುವುದೆಂದು ತ್ಯಾಗಶಬ್ದಕ್ಕೆ ಅರ್ಥವಾಗುವುದು. ಸರ್ವೇಶ್ವರನು ಅವನು ಇವನು ಎಂಬ ವ್ಯಕ್ತಿ ವಿಶೇಷನಾಗಿರನು. ಅವನು ಸಕಲದ ಸಮಷ್ಟಿರೂಪನೆಂದು ಅರಿಯತಕ್ಕದ್ದು. ಆತ್ಮನಾದರೆ ವ್ಯಕ್ತಿಯಲ್ಲಿರುವ ಜೀವಾತ್ಮನೆಂದು ವೈರಾಗ್ಯವುಳ್ಳವನು ಗ್ರಹಿಸನು. ಆದರೆ ಸರ್ವವ್ಯಾಪಿಯಾಗಿಯೂ ಸರ್ವಾಂತರ್ಯಾಮಿಯಾಗಿಯೂ ಸರ್ವರಲ್ಲಿಯೂ ಆತ್ಮರೂಪನಾಗಿರುವ ಸರ್ವೇಶ್ವರನೆಂದು ತಿಳಿಯುವನು. ಅವನು ಸಮಷ್ಟಿ ರೂಪದಲ್ಲಿ ಸರ್ವರಿಗೂ ಪ್ರತ್ಯಕ್ಷನು. ಈ ಬಗೆಯಾಗಿ ಜೀವೇಶ್ವರುಗಳಿಗೆ 'ಅಭೇಧ ಭಾವವಿರಲು, ಜೀವದ ಸೇವೆ ಈಶ್ವರನಲ್ಲಿ ಪ್ರೇಮ ಇವೆರಡೂ ಒಂದೇ. ವಿಶೇಷವಿದೀಗ ಇಲ್ಲಿ. ಜೀವ ಬುದ್ಧಿಯಿಂದ ಜೀವನಿಗೆ ಮಾಡುವ ಸೇವೆಯೇ ದಯೆ, ಪ್ರೇಮವಲ್ಲ. ಆತ್ಮಬುದ್ಧಿಯಿಂದ ಜೀವನಿಗೆ ಮಾಡುವ ಸೇವೆಯೇ ಪ್ರೇಮ. ಸಕಲರಲ್ಲಿಯೂ ಆತ್ಮನೇ ಪ್ರೇಮಾಸ್ಪದನೆಂಬುದು ಶ್ರುತಿ ಸ್ಮೃತಿ ಪ್ರತ್ಯಕ್ಷ–ಈಸಕಲ ಪ್ರಮಾಣಗಳಿಂದಲೂ ತಿಳಿದು ಬರುತ್ತದೆ. 'ಈಶ್ವರನಲ್ಲಿ ಪ್ರೇಮ. ಜೀವನಲ್ಲಿ ದಯೆ' ಎಂಬ ಭಗವಾನ್ ಚೈತನ್ಯದೇವನ ವಾಕ್ಯವು ಯುಕ್ತಿಯುಕ್ತವೇ ಸರಿ. ಅವರು ದ್ವೈತಿಗಳಾಗಿದ್ದುದರಿಂದ ಜೀವೇ

ಶ್ವರರುಗಳಿಗೆ ಭೇದವನ್ನು ಕಲ್ಪಿಸುವ ಅವರ ಸಿದ್ಧಾಂತವು ಸಮಾಚೀನ ವಾದುದೇ ಸರಿ. ಅದ್ವೈತಪರರಾದ ನಮಗಾದರೋ ಜೀವ ಬುದ್ಧಿಯು ಬಂಧನಕ್ಕೆ ಕಾರಣವೆಂದು. ಆದುದರಿಂದ ನಮಗೆ ಅವಲಂಬನವು ದಯೆ ಅಲ್ಲ. ಜೀವನ ವಿಷಯದಲ್ಲಿ 'ದಯೆ ' ಶಬ್ದವನ್ನು ಉಪಯೋಗಿಸುವುದು ಕೂಡ ದುಡುಕುತನ ವ್ಯರ್ಥವೆಂಬುದು ನನ್ನ ಭಾವನೆ. ನಾವು ದಯಾ ಪರರಲ್ಲ ಸೇವಾಪರರು. ನಮಗೆ ಅನುಕಂಪಾನುಭೂತಿಯಿಲ್ಲ. ಸಕಲದಲ್ಲಿಯೂ ಪ್ರೇಮಾನುಭವ ಆತ್ಮಾನುಭವ.

ಹೇ ' ಶರ್ಮನ್ ' ! ಸರ್ವ ವೈಷಮ್ಯವನ್ನೂ ಸಮ ಮಾಡುವ ಭವ ವ್ಯಾಧಿಯನ್ನು ಹೋಗಲಾಡಿಸುವ ಈ ಪ್ರಪಂಚದಲ್ಲಿ ಅವಶ್ಯವಾಗಿ ಒದಗುವ ತ್ರಿತಾಪಗಳನ್ನು ನಾಶಮಾಡುವ ಸಕಲ ವಸ್ತುಗಳ ನಿಜಸ್ವರೂಪ ವನ್ನು ತಿಳಿಸುವ ಮಾಯಾಂಧಕಾರವನ್ನು ಧ್ವಂಸಮಾಡುವ ಬ್ರಹ್ಮ ಮೊದಲುಗೊಂಡು ಸ್ತಂಬ ಪರ್ಯಂತ ಆತ್ಮಸ್ವರೂಪವನ್ನು ಪ್ರಕಾಶಪಡಿಸುವ ಪ್ರೇಮಾನುಭೂತಿ ಸ್ವರೂಪವಾದ ವೈರಾಗ್ಯವು ನಿನ್ನದಾಗಿರಲಿ.

ಇದೇ ಅನುದಿನವೂ ಪ್ರಾರ್ಥನೆ,

ವಿವೇಕಾನಂದ

ನಿನ್ನ ಪ್ರೇಮಕ್ಕೆ ಸತತವೂ ಕಟ್ಟುಬಿದ್ದಿರುವನು.

*   *   *

ದೇವಘರ ವೈದ್ಯನಾಥ,

೩ನೆಯ ಜನವರಿ, ೧೮೯೮.

ಓಂನಮೋ ಭಗವತೇ ರಾಮಕೃಷ್ಣಾಯ !

ತಾಯಿ !

ತಮ್ಮ ಪತ್ರದಲ್ಲಿ ಅತಿ ಗುರುತರ ಪ್ರಶ್ನೆಗಳು ಕೇಳವೆದ್ದಿರುವುವು ಮೇಲಕ್ಕೆ. ಈ ಸಣ್ಣ ಪತ್ರದಲ್ಲಿ ಅವೆಲ್ಲಕ್ಕೂ ಸದುತ್ತರ ಕೊಡುವ ಸಂಭವ ವಿಲ್ಲವಾದರೂ ಅದಷ್ಟು ಸಂಕ್ಷೇಪವಾಗಿ ಬರೆಯುವೆನು ನಾನು.

ಋಷಿಯಾಗಲಿ, ಮುನಿಯಾಗಲಿ, ದೇವತೆಯಾಗಲಿ ಯಾರಿಗೂ ಸಮಾಜಕ್ಕೆ ಕಟ್ಟುಗಳನ್ನು ವಿಧಿಸುವುದು ಸಾಧ್ಯವಲ್ಲ. ತಾತ್ಕಾಲಿಕ

ಆವಶ್ಯಕತೆಯುಂಟಾದಾಗ ಸಮಾಜವನ್ನುತ್ತಿರುವಾಗ ಆತ್ಮರಕ್ಷಣಾರ್ಥವಾಗಿ ಸಮಾಜವು ತಾನಾಗಿಯೇ ಕೆಲವು ಆಚಾರಗಳನ್ನು ಅವಲಂಬಿಸುವುದು. ಋಷಿಗಳ ಕಾರ್ಯವೇನೆಂದರೆ, ಈ ಸಕಲ ಆಚಾರಗಳನ್ನು ಬರೆದಿಡುವುದು ಮಾತ್ರ. ಆತ್ಮರಕ್ಷಣೆಯನ್ನುದ್ದೇಶಿಸಿ ಅನೇಕವೇಳೆ ತಾತ್ಕಾಲಿಕ ರಕ್ಷಣೆಗೆ ಮಾತ್ರ ಉಪಯೋಗವಾಗುವ ಆದರೆ ಮುಂದೆ ಅದೇ ಅತ್ಯಂತ ಅಹಿತಕರವಾಗುವ ಅನೇಕ ಉಪಾಯಗಳನ್ನಾಶ್ರಯಿಸುವನು ಮನುಷ್ಯನು. ಇತರನಾಗಿ ಸಮಾಜವು ಕೂಡ ಅನೇಕ ಸಂದರ್ಭಗಳಲ್ಲಿ ಯಾವ ತಾತ್ಕಾಲಿಕ ರಕ್ಷಣೋಪಾಯಗಳನ್ನಾಶ್ರಯಿಸುವುದೋ ಅವೇ ಭಯಂಕರವಾಗುವುವು ಪರಿಣಾಮದಲ್ಲಿ.

ಉದಾಹರಣೆಗಾಗಿ ನಮ್ಮ ದೇಶದಲ್ಲಿ ವಿಧವಾ ವಿವಾಹ ನಿಷೇಧವಾಗಿರುವುದನ್ನು. ಋಷಿಗಳಾಗಲಿ, ದುಷ್ಟ ನರನಾಗಲಿ ಈ ನಿಯಮಗಳನ್ನು ವಿಧಿಸಿದರೆಂದರಿಯಕೂಡದು. ಪುರುಷರಿಗೆ ಸ್ತ್ರೀಯರನ್ನು ತಮ್ಮ ಸಂಪೂರ್ಣ ಅಧೀನದಲ್ಲಿಟ್ಟುಕೊಳ್ಳಬೇಕೆಂಬ ಇಚ್ಛೆಯಿದ್ದರೂ ಸಮಾಜದ ಸಾಮಯಿಕ ಆವಶ್ಯಕತೆಯ ಸಹಾಯವನ್ನವಲಂಬಿಸದೆ ಇದ್ದಲ್ಲಿ ಅವರ ಉದ್ದೇಶವು ನೆರವೇರುತ್ತಿರಲಿಲ್ಲ. ಈ ಪದ್ಧತಿಯಲ್ಲಿ ನೋಡತಕ್ಕ ವಿಶೇಷಗಳೆರಡು.

೧. ವಿಧವಾ ವಿವಾಹ ನಡೆಯುವುದು ಕೀಳುಜಾತಿಯಲ್ಲಿ.

೨. ಮೇಲು ಜಾತಿಯಲ್ಲಿ ಪುರುಷರಿಗಿಂತ ಸ್ತ್ರೀ ಸಂಖ್ಯೆ ಹೆಚ್ಚು.

೧. ಈಗ ಪ್ರತಿಯೊಂದು ಕನ್ಯೆಗೂ ವಿವಾಹವಾಗಲೇಬೇಕೆಂಬ ನಿಯಮವಾದರೆ ಒಂದೊಂದು ಗಂಡನನ್ನು ಸಂಪಾದಿಸುವುದೇ ಕಷ್ಟ. ಹೀಗಿರುವಲ್ಲಿ, ಒಬ್ಬೊಬ್ಬಳಿಗೆ ಎರಡುಮೂರು ಗಂಡಂದಿರನ್ನು ತರುವುದೆಲ್ಲಿಂದ? ಆದುದರಿಂದ ಸಮಾಜವು ಒಂದು ಪಕ್ಷದವರಿಗೆ ಕಷ್ಟವನ್ನುಂಟುಮಾಡಿದೆ. ಏನೆಂದರೆ, ಒಂದು ಸಾರಿ ಗಂಡನನ್ನು ಪಡೆದವಳಿಗೆ ಎರಡನೆಯ ಸಾರಿ ಗಂಡನನ್ನು ಕೊಡುವುದಿಲ್ಲ. ಹಾಗೆ ಕೊಟ್ಟಲ್ಲಿ ಒಬ್ಬ ಕನ್ಯೆಗೆ ಗಂಡು ಸಿಕ್ಕದೆ ಹೋಗುವುದಷ್ಟೆ? ಆದರೆ ಯಾವ ಜಾತಿಯಲ್ಲಿ ಪುರುಷರ ಸಂಖ್ಯೆ ಅಧಿಕವೋ ಆ ಜಾತಿಯಲ್ಲಿ ಹಿಂದೆ ಹೇಳಿದ ತಂಟೆಯಿಲ್ಲದೆ, ವಿಧವಾ ವಿವಾಹವು ಉಂಟು. ಪಾಶ್ಚಾತ್ಯರಲ್ಲಿ ಕೂಡ ಕನ್ಯೆಯರಿಗೆ ಗಂಡಂದಿರು ಸಿಕ್ಕುವುದ

ಸಂಕಟವಾಗುತ್ತ ಬರುತ್ತಿದೆ. ಇದೇ ಪ್ರಕಾರವೇ ಜಾತಿಭೇದವಿಷಯದಲ್ಲಿಯೂ ಇತರ ಸಾಮಾಜಿಕ ಆಚಾರ ಸಂಬಂಧದಲ್ಲಿಯೂ.

ಆದುದರಿಂದ ಯಾವುದಾದರೂ ಸಾಮಾಜಿಕ ಆಚಾರವನ್ನು ಬದಲಾಯಿಸಬೇಕಾದರೆ ಆ ಆಚಾರ ಬಂದುದಕ್ಕೆ ಮೂಲವಾದ ಆವಶ್ಯಕತೆ ಏನೆಂಬುದನ್ನು ನಾವು ಮೊದಲು ಅನುಸಂಧಾನಮಾಡಿ, ಅದನ್ನು ಹೊರಗೆಡವಿ, ಅದನ್ನು ಮಾರ್ಪಡಿಸಿದರೆ ಆ ಆಚಾರವು ತಾನಾಗಿಯೇ ನಷ್ಟವಾಗಿಬಿಡುವುದು. ಹಾಗಿಲ್ಲದ ಪಕ್ಷಕ್ಕೆ ನಿಂದಾ ಸ್ತುತಿ ಇವುಗಳಿಂದ ಕಾರ್ಯವಾಗದು.

೨. ಈಗಣ ಪ್ರಶ್ನೆ ಇದು. ಸಮಾಜದ ನಿಯಮಗಳನ್ನು ವಿಧಿಸುವುದು ಅಥವಾ ಸಮಾಜ ಸಂಘಟಿತವಾಗುವುದು ಸಮಾಜವಲ್ಲಿ ಸಾಮಾನ್ಯರ ಕಲ್ಯಾಣ ನಿಮಿತ್ತವಾಗಿಯೇನು? ಹೌದು ಎಂಬುವರನೇಕರು. ಕಲ್ಯಾಣಕ್ಕಲ್ಲವೆಂದು ಹೇಳಬಹುದು ಕೆಲವರು. ಇತರರಿಗಿಂತ ಶಕ್ತಿವಂತರಾದ ಕೆಲವರು ಇತರರನ್ನು ಮೆಲ್ಲನೆ ತಮ್ಮ ಅಧೀನಕ್ಕೆ ತಂದು ಛಲಬಲದಿಂದಾಗಲಿ ಕೌಶಲದಿಂದಾಗಲಿ ತಮ್ಮ ಇಷ್ಟೆಯನ್ನು ಪೂರೈಸಿಕೊಳ್ಳುವರು. ಇದು ಸತ್ಯವಾದ ಪಕ್ಷದಲ್ಲಿ ಅಜ್ಞರಿಗೆ ಸ್ವಾಧೀನತೆಯನ್ನು ಕೊಡುವುದರಲ್ಲಿ ಭಯವುಂಟು ಎಂಬುದರ ಅರ್ಥವೇನು? ಸ್ವಾಧೀನತೆ ಎಂದರೇನು?

ಸ್ವಾಧೀನತೆ ಎಂದರೆ ನೀವೂ ನಾನೂ ಧನ ಮುಂತಾದುವುಗಳನ್ನು ಅಪಹರಿಸುವುದಕ್ಕೆ ತಡೆಗಳಿಲ್ಲದಿರೋಣವೆಂದರ್ಥವಲ್ಲ. ಆದರೆ ನಮ್ಮ ಶರೀರ ಬುದ್ಧಿ ಧನಾದಿಗಳನ್ನು ಪರರಿಗೆ ಕೆಡಕನ್ನುಂಟುಮಾಡದಹಾಗೆ ನಮ್ಮಿಷ್ಟ ಪ್ರಕಾರ ಉಪಯೋಗಿಸುವುದಕ್ಕೆ ನಮಗಿರುವ ಸ್ವಾಭಾವಿಕ ಅಧಿಕಾರವೇ ಸ್ವಾಧೀನತೆ. ಇನ್ನು ಈಗ ಹೇಳಿದ ಧನ ವಿದ್ಯೆ ಅಥವಾ ಜ್ಞಾನಾರ್ಜನೆ—ಇವುಗಳನ್ನು ಪಡೆಯುವುದಕ್ಕೆ ಸಮಾಜದ ಪ್ರತಿಯೊಂದು ವ್ಯಕ್ತಿಗೂ ಅವಕಾಶವಿರುವುದು ಉಚಿತ. ಎರಡನೆಯ ವಿಷಯವಾವುದೆಂದರೆ, ಅಜ್ಞರಿಗೂ ಬಡವರಿಗೂ ಸ್ವಾಧೀನತೆಯನ್ನು ಕೊಟ್ಟಲ್ಲಿ

ಹಾಗೆಯೇ ಅವರ ಮಕ್ಕಳು ಕೂಡ ಮೇಲಿನಂತಸ್ತಿನವರಂತೆ ಜ್ಞಾನ ಧನ ಮುಂತಾದುವುಗಳನ್ನು ಸಂಪಾದಿಸಿಕೊಂಡು ತಮ್ಮ ಅವಸ್ಥೆಯನ್ನು ಮೇಲು ಮಾಡಿಕೊಳ್ಳಲು ಅವರಿಗೆ ಅವಕಾಶವನ್ನು ಕೊಟ್ಟಲ್ಲಿ, ಅವರು ಉಚ್ಛೃಂಖಲರಾಗುವರೆಂದು ಹೇಳುವರಷ್ಟೆ! ಈ ಬಗೆಯ ನುಡಿ ಸಮಾಜದ ಕಲ್ಯಾಣಕ್ಕಾಗಿಯೋ ಅಥವಾ ಸ್ವಾರ್ಥದಿಂದ ಅಂಧರಾಗಿ ಹೇಳುವ ಮಾತೋ? ಇಂಗ್ಲೆಂಡಿನಲ್ಲಿ ಕೂಡ ಈ ಮಾತನ್ನು ಕೇಳಿದ್ದೇನೆ. "ಕೀಳು ಅಂತಸ್ತಿನವರಿಗೆ ಓದು ಬರಹಗಳನ್ನು ಕಲಿಸಿದರೆ ನಮ್ಮ ಚಾಕರಿ ಮಾಡುವವರಾರು?" ಎಂದು.

ಎಲ್ಲೋ ನಾಲ್ಕಾರುಮಂದಿ ಧನಿಕರ ವಿಲಾಸಕ್ಕಾಗಿ ಲಕ್ಷಲಕ್ಷ ನರನಾರಿಯರು ಅಜ್ಞಾನಾಂಧಕಾರದಲ್ಲಿಯೂ, ಅಭಾವ ನರಕದಲ್ಲಿಯೂ ನರಳಲಿ! ಏಕೆಂದರೆ, ಅವರು ಧನಿಕರಾಗಿಯೂ ವಿದ್ಯಾವಂತರಾಗಿಯೂ ಆದರೆ ಸಮಾಜ ಉಚ್ಛೃಂಖಲವಾಗುವುದಲ್ಲವೆ! ಭೇಷ್!!

ಯಾವುದು ಸಮಾಜ? ಲಕ್ಷೋಪಲಕ್ಷ ಸಾಮಾನ್ಯ ಜನರೋ! ಅಲ್ಲವೇ ನೀವು ನಾನು ಇನ್ನೂ ಹತ್ತುಮಂದಿ ಮೇಲಂತಸ್ತಿನವರೋ?

ಈ ಎರಡನೆಯದೇ ಸತ್ಯವಾದಲ್ಲಿ ನಿಮಗೂ ನಮಗೂ ಅಹಂಕಾರವೇಕೆ ನಾವೇ ಇತರರಿಗೆ ದಾರಿ ತೋರಿಸಿಕೊಡುವವರೆಂದು? ನಾವು ಸರ್ವಜ್ಞರೇನು?

'ಉದ್ಧರೇದಾತ್ಮನಾತ್ಮಾನಂ' ಆತ್ಮನಿಂದ ಆತ್ಮೋದ್ಧಾರವಾಗಬೇಕು. ಅವನವನು ಅವನವನ ಉದ್ಧಾರವನ್ನು ಮಾಡಿಕೊಳ್ಳಲಿ. ಸರ್ವವಿಧದಲ್ಲಿಯೂ ಸ್ವಾಧೀನತೆ ಎಂದರೆ ಮುಕ್ತಿ, ಮುಖವಾಗಿ ಮುಂದರಿಯೋಣವೇ ಪುರುಷಾರ್ಥ. ಯಾರಾದರೆ ಶಾರೀರಕ ಮಾನಸಿಕ ಆಧ್ಯಾತ್ಮಿಕ ಸ್ವಾಧೀನತೆಯ ಕಡೆ ಮುಂದರಿಯುವರೋ ಅವರಿಗೆ ಆ ವಿಷಯದಲ್ಲಿ ಸಹಾಯಮಾಡಿ ತಾನೂ ಆ ಮುಖವಾಗಿಯೇ ಪ್ರವರ್ತಿಸುವುದೀಗ ಪರಮ ಪುರುಷಾರ್ಥ.

ಸ್ವಾಧೀನತೆಯ ಸ್ಫೂರ್ತಿಗೆ ತಡೆಯನ್ನುಂಟುಮಾಡುವ ನಿಯಮಗಳಾವುವು ಲೌಕಿಕವೋ ಅವೆಲ್ಲವೂ ಅಮಂಗಳಕರವಾದವು. ಆದುದರಿಂದ ಅವು

ಗಳನ್ನು ಬೇಗನೆ ನಾಶಮಾಡುವ ಪ್ರಯತ್ನಗಳನ್ನು ಕೈಕೊಳ್ಳುವುದು ಚಿತ; ಯಾವ ಕಟ್ಟುಗಳ ಮೂಲಕ ಜೀವಕಳೆ ಕೊಡುವ ಸ್ವಾಧೀನತೆಯ ಮಾರ್ಗದಲ್ಲಿ ಮುಂದರಿಯಲಾಗುವುದೋ ಅವುಗಳಿಗೆ ಉತ್ತೇಜನವನ್ನು ಕೊಡುವುದುಚಿತ.

ಅಷ್ಟೇನೂ ಗುಣಾಢ್ಯನಲ್ಲದ ಯಾವನೋ ವ್ಯಕ್ತಿವಿಶೇಷನನ್ನು ಈ ಮೈಯ್ಯಲ್ಲಿ ನೋಡಿದ ಮಾತ್ರಕ್ಕೆ ಆತನಮೇಲೆ ನಮ್ಮ ಆಂತರಿಕ ಪ್ರೇಮವು ಉದ್ಭವಿಸುವುದೆಂಬ ವಿಷಯವನ್ನು ನಮ್ಮ ದೇಶೀಯ ಪಂಡಿತರು ಪೂರ್ವಜನ್ಮ ಜನಿತವಾದುದೆಂದು ಸಿದ್ಧಾಂತಮಾಡಿದ್ದಾರೆ.

ಇಚ್ಛಾಶಕ್ತಿಯನ್ನು ಕುರಿತು ತಮ್ಮ ಪ್ರಶ್ನೆಯು ಬಹಳ ಸುಂದರವಾದುದು. ಅದೇ ತಿಳಿಯತಕ್ಕ ವಿಷಯ. ಸಕಲ ಧರ್ಮಗಳ ಸಾರವೇ ಇದು. ವಾಸನಾ (ಆಶಾ) ವಿನಾಶ. ಆದುದರಿಂದ ಅದರೊಡನೆ ಇಚ್ಛಾವಿನಾಶವೂ ನಿಶ್ಚಯ; ಕಾರುಣ್ಯವಾಸನೆಯೆಂಬುದು ಇಚ್ಛಾವಿಶೇಷವೊಂದರ ಹೆಸರಷ್ಟೆ. ಇನ್ನು ಈಗ ಜಗತ್ತೇಕೆ, ಅಥವಾ ಈ ಇಚ್ಛಾವಿಕಾಸಗಳೇಕೆ! ಕೆಲವು ಧರ್ಮಗಳು ಹೇಳುತ್ತವೆ—ಅಸದಿಚ್ಛೆಗಳು ನಾಶವಾಗಬೇಕು ಸದಿಚ್ಛೆಗಳಲ್ಲ.—ಇಹದಲ್ಲಿ ವಾಸನಾ ತ್ಯಾಗವು ಪರದಲ್ಲಿ ಭೋಗಗಳ ದ್ವಾರಾ ಪರಿಪೂರಿತವಾಗುವುದು. ಪಂಡಿತರೆಂದೂ ಸಂತುಷ್ಟರಾಗರು ಈ ಉತ್ತರದಿಂದ. ಬೇರೊಂದುಕಡೆ ಬೌದ್ಧಾದಿಗಳು ಹೇಳುವುದೇನೆಂದರೆ: ದುಃಖಕ್ಕೆ ಮೂಲ ವಾಸನಾ. ಅದರ ನಾಶ ಶ್ರೇಯಸ್ಕರ. ಆದರೆ ಮೈ ಮೇಲಣ ಸೊಳ್ಳೆಯನ್ನು ಹೊಡೆಯುವುದರಲ್ಲಿ ಮನುಷ್ಯನನ್ನು ಹೊಡೆದು ಸಾಯಿಸುವಂತೆ ಬೌದ್ಧಾದಿಗಳ ಮತರೀತ್ಯಾ ದುಃಖನಾಶಮಾಡುವುದರಲ್ಲಿ ಆತ್ಮನಾಶವಾಗಿ ಬಿಡುವುದು.

ಸಿದ್ಧಾಂತವೇನೆಂದರೆ: ಯಾವುದನ್ನು ನಾವು ಇಚ್ಛೆ ಎಂದು ಕರೆಯುತ್ತೇವೆಯೋ ಅದು ತನಗಿಂತಲೂ ಉಚ್ಚತರವಾದೊಂದು ಅವಸ್ಥೆಯ ನೀಚ ಪರಿಣಾಮ. ನಿಷ್ಕಾಮವೆಂದರೆ ಇಚ್ಛಾಶಕ್ತಿರೂಪವಾದ ನಿಮ್ನ ಪರಿಣಾಮದ ತ್ಯಾಗ, ಹಾಗೆಯೇ ಉಚ್ಚ ಪರಿಣಾಮದ ಆವಿರ್ಭಾವ. ಈ ರೂಪವೇನೋ ಮನೋಬುದ್ಧಿಗಳಿಗೆ ಅಗೋಚರ. ಆದರೆ ಮೊಹರನ್ನು (ಚಿನ್ನದೊಂದು ನಾಣ್ಯ) ನೋಡುವಲ್ಲಿ ಅದು ರೂಪಾಯಿ ಕಾಸುಗಳಿಗಿಂತ

ಬಹಳವಾಗಿ ಬೇರೆಯಾಗಿದ್ದರೂ, ಇವೆರಡಕ್ಕಿಂತಲೂ ದೊಡ್ಡದೆಂದು ನಮಗೆ ಹೇಗೆ ನಿಶ್ಚಯವಾಗಿ ತಿಳಿದಿರುವುದೋ ಆಪರಿಯಾಗಿ ಉಚ್ಚತರ ಅವಸ್ಥೆಯುಂಟಲ್ಲಾ ಅದನ್ನು ಮುಕ್ತಿ ಎಂದಾಗಲೀ ನಿರ್ವಾಣವೆಂದಾಗಲೀ ಕರೆಯಲಿ, ಅದು ನಮ್ಮ ಮನೋಬುದ್ಧಿಗಳಿಗೆ ಅಗೋಚರವಾಗಿದ್ದರೂ ಇಚ್ಛಾದಿ ಇತರ ಸಕಲ ಶಕ್ತಿಗಳಿಗೂ ದೊಡ್ಡದು. ಅದು ಶಕ್ತಿಯಲ್ಲ. ಆದರೆ ಶಕ್ತಿಯು ಅದರ ನಿಮ್ನ ಪರಿಣಾಮ. ಆದುದರಿಂದ ಅದು ದೊಡ್ಡದು.

ಮೊದಲು ಸಕಾಮ ತರುವಾಯ ನಿಷ್ಕಾಮ ಭಾವದೊಡನೆ ಇಚ್ಛಾಶಕ್ತಿಯನ್ನು ಪರಿಚಾಲನ ಮಾಡುವುದರ ಫಲವೇನೆಂದರೆ ಇಚ್ಛಾಶಕ್ತಿಗಿಂತಲೂ ಉಚ್ಚತರವಾದ ಅವಸ್ಥೆಯ ಪ್ರಾಪ್ತಿ.

ಪ್ರಥಮದಲ್ಲಿ ಗುರುಮೂರ್ತಿಯ ಧ್ಯಾನಮಾಡಬೇಕು, ತದನಂತರ ಕ್ರಮವಾಗಿ ಅದನ್ನು ಇಷ್ಟಮೂರ್ತಿಯಲ್ಲಿ ಲಯ ಹೊಂದಿಸಬೇಕು ತನಗೆ ಪ್ರೀತಿ ಪಾತ್ರವಾವುದೋ ಅದೇ ಇಷ್ಟಮೂರ್ತಿಯೆಂದು ತಿಳಿಯತಕ್ಕದ್ದು..............................

ಮನುಷ್ಯನಲ್ಲಿ ಈಶ್ವರತ್ವವನ್ನು ಆರೋಪಣೆ ಮಾಡುವುದು ಬಲು ಕಷ್ಟ. ಆದರೂ ಮಾಡುತ ಮಾಡುತ ಅದು ಸಫಲವಾಗುವದು ನಿಶ್ಚಯ. ಪ್ರತಿಮನುಷ್ಯನಲ್ಲಿಯೂ ಅವನಿಗೆ ತಿಳಿಯಲೀ ತಿಳಿಯದೇ ಹೋಗಲೀ ಈಶ್ವರತ್ವವು ಆತನಲ್ಲಿ ಉದಯವಾಗಲೇ ಆಗುತ್ತದೆ.

ಸತತ ಕಲ್ಯಾಣಾಕಾಂಕ್ಷೀ.
ವಿವೇಕಾನಂದ.

ದೇವಘರ ವೈದ್ಯನಾಥ:
C/o ಬಾಬು ಪ್ರಿಯನಾಥ
ಮುಖೋಪಾಧ್ಯಾಯ.
೨೪ನೆಯ ಡಿಸೆಂಬರು ೧೯೦೦.

ತಾಯೇ,

ತಮ್ಮ ಪತ್ರವನ್ನು ಪಡೆದು ಆನಂದವಾಯಿತೆನಗೆ. ತಾವು ತಿಳಿದು ಕೊಂಡಿರುವುದು ಸರಿ. 'ಸ ಈಶ ಅನಿರ್ವಚನೀಯ ಪ್ರೇಮ ಸ್ವರೂಪಃ

ಅನಿರ್ವಚನೀಯವಾದ ಪ್ರೇಮಮೂರ್ತಿಯೇ ಆ ಈಶ್ವರನು. ನಾರದೋಕ್ತವಾದೀ ಲಕ್ಷಣವು ಪ್ರತ್ಯಕ್ಷ ಸರ್ವವಾದಿ ಮತ್ತು ಸಮ್ಮತವೆಂಬುದು ನನ್ನ ಜೀವನದ ಸ್ಥಿರ ಸಿದ್ಧಾಂತ. ಅನೇಕ ವ್ಯಕ್ತಿಗಳ ಸಮುದಾಯಕ್ಕೆ 'ಸಮಷ್ಟಿ' ಎಂದು ಹೆಸರು. ಪ್ರತಿಯೊಂದು ವ್ಯಕ್ತಿಗೂ 'ವ್ಯಷ್ಟಿ' ಎಂದು ಹೆಸರು. ನೀವು ನಾನು ವ್ಯಷ್ಟಿ. ಸಮಾಜ ಸಮಷ್ಟಿ. ನೀವು ನಾನು ಪಶು ಪಕ್ಷಿ ಕ್ರಿಮಿ ಕೀಟ ಮರ ಬಳ್ಳಿ ಭೂಮಿ ಗ್ರಹ ನಕ್ಷತ್ರಗಳೇ ಮೊದಲಾದುವು ವ್ಯಕ್ತಿಗಳು. ಈ ಜಗತ್ತು ಸಮಷ್ಟಿ. ಇದಕ್ಕೆ ವೇದಾಂತದಲ್ಲಿ ವಿರಾಟ, ಹಿರಣ್ಯಗರ್ಭ, ಈಶ್ವರ ಎಂದು ಹೆಸರು. ಪುರಾಣಗಳಲ್ಲಿ ಹೆಸರು ಬ್ರಹ್ಮ, ವಿಷ್ಣು, ದೇವಿ ಇತ್ಯಾದಿ.

ವ್ಯಷ್ಟಿಗೆ ವ್ಯಕ್ತಿಗತಸ್ವಾಧೀನತೆ ಇದೆಯೇ ಇಲ್ಲವೇ? ಇದ್ದರೆ ಅದರ ಅಳವೆಷ್ಟಿರಬೇಕು? ವ್ಯಷ್ಟಿಯು ಆತ್ಮೇಚ್ಛೆಯನ್ನೂ ಆತ್ಮಸುಖವನ್ನೂ ಸಂಪೂರ್ಣವಾಗಿ ತ್ಯಾಗಮಾಡಿ ಸಮಷ್ಟಿಗೆ ಒಪ್ಪಿಸಬೇಕೇ ಬೇಡವೇ ಎಂಬ ಪ್ರಶ್ನೆ ಈಗ ಅನಾದಿಕಾಲದಿಂದಲೂ ಸಮಾಜ ವಿಚಾರ್ಯವಾದುದು. ಈ ಪ್ರಶ್ನೆಗೆ ಉತ್ತರವನ್ನು ಪಡೆಯುವುದರಲ್ಲುದ್ಯುಕ್ತವಾಗಿರುವುದು ಸಕಲ ಸಮಾಜವೂ. ಆಧುನಿಕ ಪಾಶ್ಚಾತ್ಯ ಸಮಾಜದಲ್ಲಿ ಇದೇ ಪ್ರಬಲವಾದ ತರಂಗರೂಪವನ್ನು ತಾಳಿದ್ದು ನಿಂತಿರುವುದು. ಯಾವ ಮತಪ್ರಕಾರ ವ್ಯಕ್ತಿಗತ ಸ್ವಾಧೀನತೆಯನ್ನು ಸಮಾಜ ಪ್ರಭುತ್ವಕ್ಕೆ ಬಲಿ ಕೊಡಬೇಕಾಗುವುದೋ ಅದಕ್ಕೆ 'ಸೋಷಿಯಲಿಸಂ' ಎಂದು ಹೆಸರು. ವ್ಯಕ್ತಿತ್ವವನ್ನು ಸಮರ್ಥನ ಮಾಡುವ ಮತಕ್ಕೆ 'ಇಂಡಿವಿಡ್ಯುಅಲಿಸಂ' ಎಂದು ಹೆಸರು.

ನಿಯಮ, ಶಿಕ್ಷೆ, ಶಾಸನ ಇವುಗಳ ದ್ವಾರಾ ವ್ಯಕ್ತಿಗೊದಗಿರುವ ನಿತ್ಯದಾಸತ್ವ, ಬಲಪೂರ್ವಕ ಆತ್ಮವಿಸರ್ಜನೆ ಇವುಗಳ ಫಲ ಪರಿಣಾಮಗಳಾವುವೆಂಬುದಕ್ಕೆ ನಮ್ಮ ಮಾತೃಭೂಮಿಯೇ ಜ್ವಲಂತವಾದ ದೃಷ್ಟಾಂತ. ಈ ದೇಶದಲ್ಲಿ ಶಾಸ್ತ್ರೋಕ್ತ ವಿಧಿಗನುಸಾರವಾಗಿ ಜನಗಳ ಜನ್ಮ. ಯಾವಜ್ಜೀವವೂ ನಿಯಮಾನುಸಾರವಾಗಿ ಭೋಜನ ಪಾನ ವಿವಾಹಾದಿ ಕರ್ಮಗಳೂ ಈ ಪ್ರಕಾರವಾಗಿಯೇ. ಇನ್ನು ಸಾಯುವುದು ಕೂಡ ಶಾಸ್ತ್ರೋಕ್ತರೀತಿಯಲ್ಲಿ. ಈ ಬಗೆ ಕಠೋರ ಶಿಕ್ಷೆಯಲ್ಲಿ ಒಂದ

ದೊಡ್ಡ ಗುಣ ಬಿಟ್ಟು ಮಿಕ್ಕೆಲ್ಲವೂ ದೋಷ. ಗುಣವೇನೆಂದರೆ ಒಂದೆರಡು ಕಾರ್ಯಗಳನ್ನು ಪ್ರತಿನಿತ್ಯವೂ ಮಾಡಿ ಮಾಡಿ ಅಭ್ಯಾಸವಾಗಿ ಅಲ್ಪಾಯಾಸದಿಂದ ಚನ್ನಾಗಿ ಮಾಡಬಲ್ಲರು ಜನರು.

ಮೂರು ಮಣ್ಣುಂಡೆಗಳನ್ನು ಮಾಡಿಟ್ಟು ನಾಲ್ಕೈದು ಕಡ್ಡಿಗಳನ್ನುರಿಸಿ ಈ ದೇಶದಡುಗೆಯವನು ಮಾಡುವ ರುಚಿಕರ ಅನ್ನ ಪಲ್ಯ ಇನ್ನೆಲ್ಲಿಯೂ ದೊರೆಯುವು. ಒಂದು ರೂಪಾಯಿ ಬಾಳುವಂತಹ ಮಾಂಧಾತನ ಕಾಲದೊಂದು ಮಗ್ಗದಿಂದ ಹಳ್ಳದಲ್ಲಿ ಕಾಲಿಟ್ಟುಕೊಂಡು ಗಜ ಒಂದಕ್ಕೆ ೨೦ ರೂ. ಬೆಲೆಯುಳ್ಳ ಕಿಂಕಾಬು ಈ ದೇಶದಲ್ಲಿ ಮಾತ್ರವೇ ತಯಾರಾಗಲು ಸಾಧ್ಯ. ಹರಕು ಚಾಪೆ ಕೈ ಎಣ್ಣೆ ಮಣ್ಣುದೀಪ ಇಂತಹ ಉಪಕರಣಗಳ ಸಹಾಯದಿಂದ ಘನ ಪಂಡಿತರಾಗುವುದು ಈ ದೇಶದಲ್ಲಿ ಮಾತ್ರವೇ. ಸೊಟ್ಟಮೋರೆ ಕುರೂಪಿ ಹೆಂಡತಿಯ ಮೇಲೆ ಸಕಲವನ್ನು ಸಹಿಸುವ ಪ್ರೇಮ, ಗುಣಹೀನನೂ ದುಷ್ಟನೂ ಆದ ಗಂಡನಲ್ಲಿ ಆ ಜನ್ಮ ಭಕ್ತಿ—ಇದು ಈ ದೇಶದಲ್ಲಿ ಮಾತ್ರ ಸಾಧ್ಯ. ಇಷ್ಟು ಗುಣ. ಆದರೆ ಇವೆಲ್ಲವನ್ನೂ ಮನುಷ್ಯರು ಹೇಗೆ ಮಾಡುತ್ತಾರೆಂದರೆ—ಪ್ರಾಣವಿಲ್ಲದ ಯಂತ್ರವು ಕಾರ್ಯ ಮಾಡುವಂತೆ. ಇದರಿಂದ ಮನೋಸ್ಫೂರ್ತಿಯಿಲ್ಲ, ಹೃದಯವಿಕಾಸವಿಲ್ಲ, ಪ್ರಾಣಸ್ಪಂದನವಿಲ್ಲ, ಆಶಾತರಂಗವಿಲ್ಲ, ಶಕ್ತಿಯ ಪ್ರಬಲ ಉತ್ತೇಜನವಿಲ್ಲ, ತೀವ್ರ ಸುಖಾನುಭೂತಿಯಿಲ್ಲ, ವಿಕಟ ದುಃಖ ಸ್ಪರ್ಶವೂ ಇಲ್ಲ, ಉದ್ಭಾವನಾಶಕ್ತಿಯ ಉದ್ದೀಪನೆಯಿಲ್ಲ, ನೂತನತ್ವದ ಇಚ್ಛೆಯಿಲ್ಲ, ನೂತನ ವಸ್ತುಗಳ ಆದರಣೆಯಿಲ್ಲ. ಇದಕ್ಕಿಂತಲೂ ಉತ್ಕೃಷ್ಟವಾದ ಅವಸ್ಥೆ ಇದೆಯೋ ಇಲ್ಲವೇ ಎಂಬುದು ಮನಸ್ಸಿಗೇ ಬರುವುದಿಲ್ಲ. ಒಂದಾದರೂ ನಂಬಿಕೆಯನ್ನುಂಟು ಮಾಡುವುದಿಲ್ಲ. ನಂಬಿಕೆಯಿದ್ದರೂ ಉದ್ಯೋಗಪಿಲ್ಲ. ಉದ್ಯೋಗವಿದ್ದರೂ ಅದು ನಾಶವಾಗುವುದು ಉತ್ಸಾಹದ ಅಭಾವದಿಂದ.

ನಿಯಮಾನುಸಾರ ನಡೆಯುವುದೇ ಒಳ್ಳೆಯದಾದಲ್ಲಿ, ಚಿರಕಾಲದಿಂದ ಕ್ರಮವಾಗಿ ಬಂದ ರೀತಿ ನೀತಿಗಳ ಅಖಂಡಾನುಸರಣವೇ ಧರ್ಮ

ವಾದಲ್ಲಿ, ಮರಕ್ಕಿಂತಲೂ ಧಾರ್ಮಿಕವಾದುದಾವುದು? ರೈಲುಗಾಡಿಗಿಂತಲೂ ಭಕ್ತಸಾಧು ಯಾರು? ನೀವೇ ಹೇಳಿರಿ. ಕಲ್ಲು ಚೂರು ಪ್ರಾಕೃತಿಕ ನಿಯಮವನ್ನೆಂದಾದರೂ ಉಲ್ಲಂಘಿಸುವುದನ್ನು ನೋಡಿರುವರಾರು! ಆಕಳು ಎನ್ನು ಪಾಪ ಮಾಡುವುದನ್ನೆಂದಾದರೂ ನೋಡಿರುವರಾರು?

ದೊಡ್ಡದಾದ ಉಗಿಹಡಗು, ಮಹಾಬಲವಾದ ರೈಲ್ ಎಂಜಿನ್ ಇವು ಜಡ (ಅಚೇತನ). ಅವು ನಡೆಯುತ್ತವೆ, ತಿರುಗುತ್ತವೆ, ಓಡುತ್ತವೆ. ಆದರೂ ಅವು ಜಡ. ಆದರೆ ಆತ್ಮರಕ್ಷಣಾರ್ಥವಾಗಿ ರೈಲ್‌ಮಾರ್ಗದಿಂದ ತಪ್ಪಿಸಿಕೊಳ್ಳಲು ಪಕ್ಕಕ್ಕೆ ಸರಿದ ಸಣ್ಣದೊಂದು ಕೀಟವು ಚೈತನ್ಯಶಾಲಿಯಾಗಿರುವುದೇಕೆ? ಯಂತ್ರದಲ್ಲಿ ಇಚ್ಛಾಶಕ್ತಿ ವಿಕಾಸವಿಲ್ಲ. ಯಂತ್ರವು ನಿಯಮವನ್ನತಿಕ್ರಮಿಸಲೊಲ್ಲದು. ಕೀಟವಾದರೋ ನಿಯಮಕ್ಕೆ ತಡೆಯನ್ನೊಡ್ಡಲಿಚ್ಛೆಯುಳ್ಳುದು. ಆಗಲಿ ಆಗದಿರಲಿ ನಿಯಮವನ್ನಿದಿರಿಸುವದದು. ಅದು ಚೇತನ ಈ ಇಚ್ಛಾಶಕ್ತಿಯು ಸಫಲ ವಿಕಾಸವೆಷ್ಟು ಹೆಚ್ಚೋ ಅಷ್ಟು ಸುಖ ಹೆಚ್ಚು. ಅಷ್ಟು ದೊಡ್ಡದು ಆ ಜೀವ. ಈಶ್ವರನ ಇಚ್ಛಾಶಕ್ತಿ ಪೂರ್ಣ ಸಫಲವಾದುದರಿಂದಲೇ ಅದು ಸರ್ವೋಚ್ಚ.

ವಿದ್ಯಾಶಿಕ್ಷೆ ಎಂಬುದೇನು? ಪುಸ್ತಕಪಾಠವೇನದು? ಅಲ್ಲ. ನಾನಾ ವಿಧ ಜ್ಞಾನಾರ್ಜನೆಯೇನು? ಅದೂ ಅಲ್ಲ. ಯಾವ ಶಿಕ್ಷೆಯ ದ್ವಾರಾ ಈ ಇಚ್ಛಾಶಕ್ತಿಯ ವೇಗಸ್ಫೂರ್ತಿಗಳು ಆತ್ಮಾಧೀನವಾಗಿ ಸಫಲವಾಗುವುವೋ ಅದೀಗ ಶಿಕ್ಷೆ. ಯಾವುದರ ಫಲವಾಗಿ ಈ ಇಚ್ಛಾಶಕ್ತಿಯು ತಲೆಮೊರೆಯಾಗಿ ಬಲಪೂರ್ವಕ ನಿರೋಧಿಸಲ್ಪಟ್ಟು ಈಗ ಮೃತ ಪ್ರಾಯವಾಗಿರುವುದೋ ಅದು ಶಿಕ್ಷೆಯೇನು? ನೀವೇ ಆಲೋಚಿಸಿರಿ. ಯಾವುದರ ಪ್ರಭುತ್ವದಲ್ಲಿ ನೂತನ ಭಾವಗಳಮಾತೇ ದೂರವಾಗಿದೆಯೋ, ಇನ್ನೂ ಪುರಾತನ ಭಾವಗಳೂ ಕೂಡ ಒಂದೊಂದಾಗಿ ಅದೃಶ್ಯವಾಗುತ ಹೋಗುತ್ತಿವೆಯೋ, ಮತ್ತಾವುದು ಮನುಷ್ಯನನ್ನು ಮೆಲ್ಲನೆ ಯಂತ್ರ ಪ್ರಾಯನನ್ನಾಗಿ ಮಾಡುತ್ತಲಿದೆಯೋ ಅದೆಂತಹ ಶಿಕ್ಷೆ? ಚಾಲಿತಯಂತ್ರದಂತೆ ಒಳ್ಳೆಯದಾಗಿರುವುದಕ್ಕಿಂತಲೂ ಸ್ವಾಧೀನ ಇಚ್ಛಾ ಚೈತನ್ಯಶಕ್ತಿ ಇವುಗಳ ಪ್ರೇರಣೆಯಿಂದ ದಾರಿತಪ್ಪಿ ಹೋಗುವುದು ಕಲ್ಯಾಣಕರವು. ಮಣ್ಣು

ಮುದ್ದೆಗಳಂತೆಯೂ ಚೈತನ್ಯಶೂನ್ಯವಾದ ಯಂತ್ರಗಳಂತೆಯೂ ರಾಶಿಹಾಕಿದ ಕಲ್ಲುಗಳಂತೆಯೂ ಇರುವ ಮನುಷ್ಯರಿಂದ ಘಟಿತವಾದ ಸಮಷ್ಟಿಗೆ ಸಮಾಜವೆಂಬ ಹೆಸರು ಸಲ್ಲುವುದೇನು? ಅಂತಹ ಸಮಾಜಕ್ಕೆ ಕಲ್ಯಾಣವೆಲ್ಲಿಯದು? ಕಲ್ಯಾಣ ವುಂಟಾಗಿದ್ದ ಪಕ್ಷದಲ್ಲಿ ಸಾವಿರಾರು ವರ್ಷಗಳಿಂದಲೂ ಗುಲಾಮ ಗಿರಿಯಲ್ಲಿ ನರಳದೆ ಪೃಥ್ವಿಯಲ್ಲಿ ಸರ್ವೋತ್ಕೃಷ್ಟ ಜನಾಂಗವಾಗಿರುತ್ತಿದ್ದೆವು ನಾವು. ಮಹಾ ಮೂರ್ಖತನಕ್ಕೆ ಆಕರವಾಗಿರದೆ ವಿದ್ಯೆಯ ನಿತ್ಯಪ್ರಸ್ರವಣವಾಗುತ್ತಿದ್ದಿತೀ ಭಾರತ ಭೂಮಿಯು.

ಹಾಗಾದರೆ ಆತ್ಮತ್ಯಾಗ ಧರ್ಮವಲ್ಲವೇನು? ಓರ್ವನ ಸುಖವನ್ನು ಅನೇಕರಿಗಾಗಿ ತ್ಯಾಗಮಾಡುವುದು ಪುಣ್ಯವಲ್ಲವೇನು? ಸರಿ ನಮ್ಮ ವಂಗ ಭಾಷೆಯ ಗಾಣ್ಣುಡಿಯಂತೆ ಉಜ್ಜಿ ತಿಕ್ಕುವುದರಿಂದ ಅಂದವಾದೀತೆ? ಪ್ರಯತ್ನದಿಂದಲೂ ಬಲಾತ್ಕಾರದಿಂದಲೂ ಪ್ರೀತಿ ಹುಟ್ಟುವುದೇನು? ಎಂದೂ ತಿರುಕನ ತ್ಯಾಗದಲ್ಲಿರುವ ಮಹಿಮೆಯೇನು? ಇಂದ್ರಿಯ ಹೀನನ ಇಂದ್ರಿಯ ನಿಗ್ರಹದಲ್ಲಿರುವ ಪುಣ್ಯವೇನು? ಭಾವಹೀನ, ಹೃದಯಹೀನ, ಉತ್ಸಾಹಹೀನ, ಸಮಾಜದ ಅಸ್ತಿತ್ವ ನಾಸ್ತಿತ್ವ ಜ್ಞಾನಹೀನನಲ್ಲಿರುವ ಆತ್ಮೋತ್ಸರ್ಗವೇನು? ಬಲತ್ಕಾರವಾಗಿ ಸತಿ ಮಾಡಿಸುವುದರಲ್ಲಿ ಸತೀತ್ವವೇನು? ಕುಸಂಸ್ಕಾರಶಿಕ್ಷೆಯ ಮೂಲಕ ಪುಣ್ಯ ಕೆಲಸಗಳನ್ನು ಮಾಡಿಸುವುದೇಕೆ? ನಾನು ಹೇಳುವುದೇನು? ಜನಗಳ ಬಂಧನಗಳನ್ನು ಬಿಡಿಸಿರಿ, ಜೀವದ ಬಂಧನಗಳನ್ನು ಬಿಡಿಸಿರಿ. ಕೊಳೆಯಿಂದ ಕೊಳೆಯನ್ನು ತೊಳೆಯಲಾದೀತೆ? ಬಂಧನ ದ್ವಾರಾ ಬಂಧನವಿಮೋಚನವಾದೀತೆ? ಉದಾಹರಣೆ ಎಲ್ಲಿ? ಸಮಾಜಹಿತಕ್ಕಾಗಿ ತಮ್ಮ ಸಮಸ್ತ ಸುಖೇಚ್ಛೆಯನ್ನು ಎಂದು ತ್ಯಾಗ ಮಾಡುವಿರೋ ಅಂದು ತಾವು ಬುದ್ಧರು, ಮುಕ್ತರು. ಆಕೊನೆ ಬಲುದೂರ. ಆ ಮಾರ್ಗಾವಲಂಬನೆಯು ನಿರ್ಬಂಧದಿಂದಾದೀತೆ? ಆಹಾ! ನಮ್ಮ ವಿಧವೆಯರು ನಿಸ್ವಾರ್ಥ ತ್ಯಾಗಕ್ಕೆ ಎಂತಹ ದೃಷ್ಟಾಂತ. ಇಂತಹ ರೀತಿ ಬೇರೊಂದುಂಟೆ? ಆಹಾ! ಬಾಲ್ಯ ವಿವಾಹದ ಸವಿ ಎಷ್ಟು. ಅಂತಹ ವಿವಾಹದಲ್ಲಿ ಗಂಡ ಹೆಂಡರಿಗೆ ಪ್ರೇಮ ಹೊರತು ಇರುವುದು ಮತ್ತೇನು? ಹೀಗೆ ಹೇಳುವುದೇ ಎಲ್ಲರ ಮೂಗಿನ ಅಳು–ಸಲ್ಲಪಿ. ಇನ್ನು ಯಾರ ಕೈಯಲ್ಲಿ ಚಾಟಿ ಕೋಲಿರುವುದೋ ಅಂದರೆ

ಯಾರಕ್ಕೈ ಮೈಲಾಗಿದೆಯೋ ಆ ಪುರುಷರಿಗೆ ಆತ್ಮತ್ಯಾಗದ ಆವಶ್ಯಕತೆ ಕೊಂಚವೂ ಇಲ್ಲ. ಸೇವಾ ಧರ್ಮಕ್ಕಿಂತಲೂ ಮೇಲಾದುದು ಬೇರೊಂದುಂಟೆ? ಇದು ಬ್ರಾಹ್ಮಣರಿಗೆ ಅನ್ವಯಿಸದು; ನಿಮಗೆ ಮಾತ್ರ. ನಿಜವೇನೆಂದರೆ, ನಮ್ಮ ದೇಶದಲ್ಲಿಯ ತಾಯಿ ತಂದೆಗಳೂ ಬಂಧು ಬಳಗದವರೂ ತಮ್ಮ ಸ್ವಾರ್ಥಕ್ಕಾಗಿ ತಮ್ಮ ಸಮಾಜದಿಂದ ಅವಮಾನವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮಮತೆ ಇಲ್ಲದೆ ತಮ್ಮ ಮಕ್ಕಳನ್ನು (ಹುಡುಗರನ್ನೂ ಹುಡಿಗಿಯರನ್ನೂ) ಬಲಿಕೊಡಬಲ್ಲರು. ಏಕೆಂದರೆ, ತಲೆ ಮೊರೆಯಾಗಿ ಬಂದಿರುವ ಶಿಕ್ಷೆಯು ಮನೋಜಡತ್ವವನ್ನುಂಟುಮಾಡಿ ಆ ಮಾರ್ಗವನ್ನು ತೆರೆದು ಕೊಟ್ಟಿರುವುದು. ಯಾವನು ವೀರನೋ ಆತನೇ ತ್ಯಾಗ ಮಾಡಬಲ್ಲಾತನು. ಹೇಡಿಯು ಚಾಟಿಗಂಜಿ ಒಂದು ಕೈಯಿಂದ ಕಣ್ಣೊರೆಸಿಕೊಳ್ಳುತ್ತ ಮತ್ತೊಂದರಿಂದ ದಾನ ಮಾಡುತ್ತಾನೆ. ಇಂತಹ ದಾನದಿಂದ ಫಲವೇನು? ವಿಶ್ವಪ್ರೇಮ ಬಲುದೂರ. ಎಳೆಯ ಸಸಿಗೆ ಬೇಲಿ ಹಾಕಿ ಕಾಪಾಡಬೇಕಷ್ಟೆ! ಸ್ವಾರ್ಥವಿಲ್ಲದೆ ಒಂದನ್ನು ಪ್ರೀತಿಸಲು ಕಲಿತರೆ ಮುಂದೆ ಕ್ರಮವಾಗಿ ಜಗತ್ಪ್ರೇಮವನ್ನು ಪಡೆಯಲು ಆಸೆ ಹುಟ್ಟಬಲ್ಲುದು. ಇಷ್ಟ ದೇವತೆಯನ್ನು ಮೊದಲು ಒಲಿದರೆ ಕ್ರಮವಾಗಿ ವಿರಾಟ ಬ್ರಹ್ಮದಲ್ಲಿ ಪ್ರೀತಿಯುಂಟಾಗ ಬಲ್ಲುದು.

ಆದುದರಿಂದ ಒಬ್ಬನಿಗೋಸ್ಕರ ಆತ್ಮ ತ್ಯಾಗ ಮಾಡುವುದಕ್ಕಾದರೆ ಆಗ ಸಮಾಜಕ್ಕಾಗಿ ಆತ್ಮತ್ಯಾಗದ ಮಾತು ಸರಿ. ಅದಕ್ಕೆ ಮುಂಚೆ ಅಲ್ಲ. ಸಕಾಮದಿಂದ ನಿಷ್ಕಾಮ. ಮೊದಲು ಕಾಮವಿಲ್ಲದೆ ನಿಷ್ಕಾಮವೆಂದರೇನು? ಅದರ ಅರ್ಥವೇನು? ಕತ್ತಲು ಇಲ್ಲದೆ ಬೆಳಕು ಮನಸ್ಸಿಗೆ ಬರುವ ಬಗೆ ಹೇಗೆ?

ಮೊದಲು ಸಕಾಮ ಸಪ್ರೇಮ ಪೂಜೆ. ಸಣ್ಣದರ ಪೂಜೆ ಮೊದಲು, ತರುವಾಯ ತಾನಾಗಿಯೇ ಬರುವುದು ದೊಡ್ಡದರ ಪೂಜೆ.

ತಾಯೇ! ತಮಗೆ ಚಿಂತೆ ಬೇಡ. ಬಿರುಗಾಳಿಯು ಏಟು ದೊಡ್ಡ ಮರಕ್ಕೆ. "ಕಟ್ಟಿಗೆಯನ್ನು ಕದಲಿಸಿ ಒಳಗೆ ತಳ್ಳಿದರೆ ಉರಿ ಹೆಚ್ಚು." "ತಲೆಯಮೇಲೆ ಪೆಟ್ಟುಬಿದ್ದರೆ ಹೆಡೆಯೆತ್ತುವುದು ಹಾವು" ಎಂದು

ಮುಂತಾಗಿ. ಎಂದು ಹೃದಯದಲ್ಲಿ ಮಹಾವೇದನೆಯುಂಟಾಗುವುದೋ, ಎಂದು ನಾಲ್ಕು ದೆಸೆಗಳಲ್ಲಿಯೂ ದುಃಖವೆಂಬ ಬಿರುಗಾಳಿ ಎದ್ದುಬೀಸುವುದೋ, ಎಂದು ಬೆಳಕು ಕಾಣದೆ ಹೋಗುವಂತೆ ತೋರುವುದೋ ಎಂದು ಆಸೆ ಧೈರ್ಯ ಹೋದಂತಿರುವುದೋ ಆಗತಾನೆ ಈ ಮಹಾ ಆಧ್ಯಾತ್ಮಿಕ ಝಂಝಾವಾತ ಮಧ್ಯದಲ್ಲಿ ಉಂಟಾಗುವುದು ಬ್ರಹ್ಮಜ್ಯೋತಿಯ ಸ್ಫೂರ್ತಿಯು. ಊಟಕ್ಕೆ ಹಾಲುಅನ್ನ, ಮಲಗುವುದಕ್ಕೆ ಮೆತ್ತನೆಯ ಸುಪ್ಪತ್ತಿಗೆ, ಕಣ್ಣಿನಿಂದ ಬೊಟ್ಟು ನೀರು ಬಂದುದಿಲ್ಲೆಂದೂ– ಈ ಬಗೆ ಬೆಳೆದು ದೊಡ್ಡವರಾಗಿರುವರಾರು? ಇಂತಹವರಲ್ಲಿ ಒಳಗಿರುವ ಬ್ರಹ್ಮನನ್ನು ಪ್ರಕಾಶಗೊಳಿಸುವರಾರು? ಅಳುವುದಕ್ಕೇಕೆ ನಮ್ಮ ಭಯ! ಅಳು. ಅಳುತ ಅಳುತ ಕಣ್ಣು ಚೊಕ್ಕಟವಾಗಿ ತರುವಾಯ ಒಳಗಣ್ಣು ತೆರೆಯುವುದು. ಆಗ ಮೆಲ್ಲನೆ ಮನುಷ್ಯ, ಪಶು, ಮರ ಎಂಬ ಭೇಧವು ತೊಲಗಿ ಸರ್ವತ್ರ ಬ್ರಹ್ಮದರ್ಶನವಾಗುವುದು.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತ ಮೀಶ್ವರಂ ।
ನಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂಗತಿಂ ||

ಈಶ್ವರನನ್ನು ಎಲ್ಲ ಕಡೆಯಲ್ಲಿಯೂ ಸಮವಾಗಿರುವಾತನೆಂದು ನೋಡಿ ತನ್ನಿಂದ ತನ್ನನ್ನು ಕೆಡಿಸದೆ ಶ್ರೇಷ್ಠವಾದ ಗತಿಯನ್ನು ಹೊಂದುವನು.

ತಮ್ಮ ಸತತ ಹಿತ ಚಿಂತಕ
ವಿವೇಕಾನಂದ.

—

ನ್ಯೂ ಯಾರ್ಕ್
೯ನೆಯ ಏಪ್ರಿಲ್ ೧೮೯೪

ಪ್ರಿಯ ಅಳಸಿಂಗಾ,

ನಿನ್ನ ಕೊನೆಯ ಪತ್ರಗಳು ಕೆಲವು ದಿವಸಗಳ ಹಿಂದೆ ನನ್ನ ಕೈಸೇರಿದುವು. ನೋಡು! ನನಗಿಲ್ಲಿಎಷ್ಟು ತೊಂದರೆ! ಪ್ರತಿ ದಿವಸವೂ ನಾನು ಬರೆಯತಕ್ಕ ಕಾಗದಗಳೆಷ್ಟು? ಹೀಗಿರಲು ನೀನು ನನ್ನಿಂದ ಯಾವಾಗಲೂ ಪತ್ರಗಳನ್ನು ಪಡೆಯುವ ಆಸೆಯನ್ನು ಇಟ್ಟುಕೊಳ್ಳಲಾಗದು. ಹೇಗಾದರೂ ಆಗಲಿ, ಇಲ್ಲಿ ನಡೆಯುವುದನ್ನು ನೀನು ಸ್ಥೂಲವಾಗಿ ತಿಳಿದುಕೊಳ್ಳಲಾಗುವ ವಿಶೇಷ ಪ್ರಯತ್ನವನ್ನು ನಾನು ಮಾಡುತ್ತೇನೆ. ಈ ಧರ್ಮ ಮಹಾಸಭೆಗೆ ಸಂಬಂಧವಾದೊಂದು ಪುಸ್ತಕವನ್ನು ನಿನಗೆ ಕಳುಹಿಸಬೇಕೆಂದು ಚಿಕಾಗೋವಿಗೆ ಬರೆದಿರುವೆನು. ಇಷ್ಟರೊಳಗೆ ನನ್ನ ಸಣ್ಣ ಭಾಷಣಗಳೆರಡು ನಿನ್ನ ಕೈಸೇರಿರುವುದು ನಿಶ್ಚಯ.

ನಾನು ಇಂಡಿಯಕ್ಕೆ ಹಿಂದಿರುಗಬೇಕೆಂದು ಸೆಕ್ರೆಟರಿ ಸಾಹೇಬರು ಬರೆದಿದ್ದಾರೆ. ಏಕೆಂದರೆ, ಅದೇ ನನ್ನ ಕಾರ್ಯಕ್ಷೇತ್ರವಂತೆ. ಅದರಲ್ಲೇನೂ ಸಂಶಯವಿಲ್ಲ. ಎಲೈ ತಮ್ಮ! ಭಾರತವರ್ಷದ ಮೇಲೆಲ್ಲಾ ಬೆಳಕನ್ನೆರಚುವ ದೀವಟಿಗೆಯನ್ನು ಹೊತ್ತಿಸ ಬೇಕಾಗಿರುವುದು ನಾವು. ಆದುದರಿಂದ ನಮಗೇಕಪ್ಪ ಅವಸರ. ಸಕಲವೂ ಬರುವುದು ಭಗವಂತನ ಕೃಪೆಯಿಂದ. ಅಮೆರಿಕದ ಅನೇಕ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಉಪನ್ಯಾಸ ಮಾಡಿದ್ದೇನೆ ನಾನು. ಅದರಿಂದ ಬಂದ ಹಣದಲ್ಲಿ ಇಲ್ಲಿ ನನ್ನ ಭಯಂಕರವಾದ ಖರ್ಚು ನಡೆಯುತ್ತದೆ. ಸುತ್ತುವುದಕ್ಕೆ ಗಾಡಿ ಬಾಡಿಗೆಯೇ ಬೇಕಾದಷ್ಟು ಆಗುತ್ತದೆ. ಇಲ್ಲಿ ಹೆಚ್ಚು ಮಂದಿಯ ಸ್ನೇಹವನ್ನು ಬೆಳೆಸಿದ್ದೇನೆ. ಅವರಲ್ಲಿ ಕೆಲವರು ಮಹಾಪ್ರಭಾವವುಳ್ಳವರು. ಇಲ್ಲಿಯ ಗೊಡ್ಡು ಪುರೋಹಿತರು (Orthodox clergymen) ನನ್ನ ವಿರೋಧಿಗಳೆಂಬುದು ಸಹಜ. ನನ್ನೊಡನೆ ಕೈ ಮಿಲಾಯಿಸುವುದು ಸುಲಭ ಸಾಧ್ಯವಲ್ಲವೆಂಬುದನ್ನರಿತು ಎಲ್ಲ ವಿಧಗಳಲ್ಲಿಯೂ ನನಗಡ್ಡಿಮಾಡಿ ನನ್ನನ್ನು ಬೈದು ದೂಷಿಸಲು ಪ್ರಯತ್ನ ಪಡುತ್ತಾರೆ. ಸಾಲದುದಕ್ಕೆ ಮ॥....ಬಾಬು ಅವರು ಅವರಿಗೆ ಸಹಾಯ ಮಾಡುತ್ತಿದ್ದಾರೆ. ಅವರಿಗೆ ನಿಶ್ಚಯವಾ

ಗಿಯೂ ನನ್ನನ್ನು ಹಿಂಸಿಸುವ ಹುಚ್ಚು ಹಿಡಿದಿದೆ. ನಾನೊಬ್ಬ ನವುಯ ಚರಿತ ಕಳ್ಳನೆಂದೂ ಪಟಿಂಗನೆಂದೂ ಅವರೊಡನೆ ಹೇಳುತ್ತಾರೆ. ಅಲ್ಲದೆ ಕಲ್ಕತ್ತೆಗೆ ಹಿಂದಿರುಗಿ ಅಂತಹವರೊಡನೆ, ನಾನು ಅಮೆರಿಕಕ್ಕೆ ತೆರಳಿ ಘೋರವಾದ ವ್ಯಭಿಚಾರದಲ್ಲಿ ಮುಳುಗಿ ಹೋಗಿ ಪುಂಡು ಜೀವನ ವನ್ನು ನಡೆಸುತ್ತಿದ್ದೇನೆಂದು ಹೇಳುತ್ತಾರೆ. ಈಶ್ವರನು ಅವರನ್ನು ಹರಸಲಿ. ಎಲಾ ತಮ್ಮ! ವಿಘ್ನಗಳಿಲ್ಲದೆ ಯಾವದೊಂದು ಒಳ್ಳೆಯ ಕಾರ್ಯ ವೂ ನಡೆಯದು. ಯಾರಾದರೆ ಕೊನೆಯವರೆಗೂ ಬಿಡದೆ ಪಟ್ಟುಹಿಡಿಯುವ ರೋ ಅವರಿಗೆ ಮಾತ್ರವೇ ಕಾರ್ಯಸಿದ್ಧಿ. ನಾನು ನಿನ್ನ ಭಾವಂದಿರು ಬರೆದಿರುವ ಪುಸ್ತಕಗಳನ್ನೂ, ನಿನ್ನ ಹಚ್ಚು ಸ್ನೇಹಿತನ ಪತ್ರವೊಂದನ್ನೂ ಪಡೆದಿದ್ದೇನೆ. ಯುಗ ಸಂಬಂಧವಾದ ಪ್ರಬಂಧವು ಬಹಳ ಸೊಗಸಾಗಿದೆ ಅದರಲ್ಲಿ ಯುಗದ ವಿಷಯವಾಗಿ ಯಾವ ವ್ಯಾಖ್ಯೆಮಾಡಿದೆಯೋ ಅದೇ ಸರಿಯಾದ ವ್ಯಾಖ್ಯೆ. ನನ್ನ ನಂಬಿಕೆ ಏನೆಂದರೆ, ಸತ್ಯಯುಗ ಮುಂದೆ ಬರು ತ್ತಿದೆ. ಆಗ ಒಂದೇ ಜಾತಿ, ಒಂದೇ ವೇದ, ಶಾಂತಿ, ಮೈತ್ರಿ ಆಗು ತ್ತವೆ. ಈ ತೆರನಾದ ಸತ್ಯಯುಗದ ಭಾವನೆಯೇ ಈ ಭಾರತ ವರ್ಷವನ್ನು ಪುನರುಜ್ಜೀವನ ಗೊಳಿಸುವಂಥದು. ಇದರಲ್ಲಿ ನಂಬಿಕೆಯನ್ನಿಡು.

ಈಗೊಂದು ಕಾರ್ಯ ಮಾಡುವುದು ಅವಶ್ಯಕ. ಅದು ನಿಮ್ಮ ಕೈ ಲಾದರೆ ಒಳ್ಳೆಯದು. ಮದ್ರಾಸಿನಲ್ಲಿ ನೀವು ದೊಡ್ಡದೊಂದು ಸಭೆಯನ್ನು ಸೇರಿಸುವುದಕ್ಕಾಗುವುದೇನು? ರಾಮನಾಡಿನ ರಾಜರನ್ನಾಗಲಿ, ಅಲ್ಲವೆ ಅವರಂತಹ ದೊಡ್ಡ ಮನುಷ್ಯರಾರನ್ನಾಗಲಿ, ಸಭಾಪತಿಯನ್ನಾಗಿ ಮಾಡಿ ಆ ಸಭೆಯಲ್ಲಿ ನನ್ನ ವಿಷಯವನ್ನು ಕೊಂಚ ಎತ್ತಿ, ನಾನು ಅಮೆರಿಕದಲ್ಲಿ ಹಿಂದೂ ಧರ್ಮವನ್ನು ಯಾವ ಭಾವದಿಂದ ವ್ಯಾಖ್ಯಮಾಡಿರುವೆನೋ ಅದರಿಂದ ನಿಮಗೆ ಸಂಪೂರ್ಣವಾಗಿ ಸಂತೋಷ ಉಂಟಾಗಿರುವುದೆಂಬುದ ನ್ನು ಅಂಗೀಕರಿಸಿ (ನೀವು ನಿಜವಾಗಿಯೂ ಈ ಪ್ರಕಾರ ತಿಳಿದುಕೊಂಡಿದ್ದ ಲ್ಲಿ) ಇಲ್ಲಿಗೆ ಆ ಸಂಗತಿಯನ್ನು ಕಳುಹಿಸಿ ಕೊಡಲಾಗುವುದೇ ನಿಮ್ಮಿಂದ ತರುವಾಯ ಅದೇ ಸಮಾಚಾರವನ್ನು ಷಿಕಾಗೊ ಹೆರಲ್ಡ (Chicago Herald), ಇಂಟರ್ ಏಸಿಯನ್ (Inter Asian,) ನ್ಯೂಯಾರ್ಕ್ ಸನ್ (New YorkSun), ಹಾಗೆಯೇ ಡಿಟ್ರಾಯಿಟ್ (Detriot)

ಮಿಚಿಗನ್ (Mich-gan) ನಿಂದ ಹೊರಡುವ ಕಮರ್ಷಿಯಲ್ ಅಡ್ವರ್ಟೈಸರ್(Commercial Advertiser) ಈ ಪತ್ರಿಕೆಗಳಿಗೆ ಕಳುಹಿಸಬೇಕು. ಷಿಕಾಗೋ(Chicago)ಇಲ್ಲಿನಾಯಿಸ್ (Illinois) ಕೌಂಟಿಯಲ್ಲಿದೆ. ನ್ಯೂಯಾರ್ಕ್ ಸನ್ನಿನ ವಿಶೇಷ ವಿಳಾಸವೇನು ಇಲ್ಲ. ಕೆಲವು ಪ್ರತಿಗಳನ್ನು ಧರ್ಮ ಮಹಾಸಭೆಯ ಸಭಾಪತಿಗಳಾಗಿದ್ದ ಡಾಕ್ಟರ್ ಬ್ಯಾರೋಸ್(Dr. Barrows) ಅವರಿಗೆ ಷಿಕಾಗೋ ವಿಳಾಸಕ್ಕೆ ಕಳುಹಿಸಬೇಕು. ಅವರ ಮನೆಯ ನಂಬರು ನನಗೆ ಮರೆತುಹೋಗಿದೆ. ಅವರಿರುವ ರಸ್ತೆ ಯಿಂಡಿಯಾನಾ ಅವೆನ್ಯು (Indiana Avenue). ಒಂದು ಪ್ರತಿಯನ್ನು ಡಿಟ್ರಾಯಿಟ್‌ನಲ್ಲಿರುವ ಮಿಸಸ್. ಎ. ಎ. ಬಾಗಿ ಅವರ ವಿಳಾಸಕ್ಕೆ ಕಳುಹಿಸಬೇಕು. ಆಕೆಯ ವಿಳಾಸ ವಾಷಿಂಗ್‌ಟನ್ ಅವೆನ್ಯು. ಸಭೆಯು ಬಹಳ ದೊಡ್ಡದಾಗುವ ಚೇಷ್ಟೆಯನ್ನು ಮಾಡತಕ್ಕದ . ದೊಡ್ಡ ದೊಡ್ಡ ಮನುಷ್ಯರನ್ನು ಹಿಡಿದು ತಂದು ಈ ಸಭೆಗೆ ಸೇರಿಸುವ ಪ್ರಯತ್ನವು ನಡೆಯಬೇಕು. ತಮ್ಮ ಧರ್ಮದ ಸಲುವಾಗಿ ಅವರು ಬಂದು ಸೇರುವುದು ಉಚಿತ. ಮೈಸೂರು ಮಹಾರಾಜರೂ ಅವರ ದಿವಾನರೂ ಸಭೆ ಕೂಡಿಸಿ ಅವರ ಉದ್ದೇಶ ಸಮರ್ಥನೆ ಮಾಡಿ ಪತ್ರವನ್ನು ಬರೆದು ಕಳುಹಿಸುವ ಚೇಷ್ಟೆಯನ್ನು ಮಾಡತಕ್ಕದು. ಖೇತಡಿ ಮಹಾರಾಜರಿಂದಲೂ ಈ ಪ್ರಕಾರವಾದ ಪತ್ರವು ಬರುವ ಏರ್ಪಾಟು ಮಾಡು. ಒಟ್ಟಿನಲ್ಲಿ ಸಭೆಯು ಎಷ್ಟು ದೊಡ್ಡದಾಗ ಬೇಕೋ ಅದಕ್ಕೆ ಎಷ್ಟು ದೊಡ್ಡ ದೊಡ್ಡ ಮನುಷ್ಯರು ಬರಬೇಕೋ ಆ ಪ್ರಯತ್ನವನ್ನು ಮಾಡು.

ಏಳಿರಿ, ಹುಡುಗರಿರಾ! ಈ ಕಾರ್ಯಕ್ಕೆ ಕಂಟು ಬೀಳಿರಿ. ನೀವೆಷ್ಟು ಮಾಡುವುದಕ್ಕಾದರೆ ಮುಂದೆ ನಮಗೆ ಅನೇಕ ಕಾರ್ಯಗಳನ್ನು ಮಾಡಲು ಅವಕಾಶವಾಗುತ್ತದೆ. ಇದು ನಿಶ್ಚಯ.

ಸಭೆಯಲ್ಲಿ ಎತ್ತಿ ಅಂಗೀಕರಿಸಿದ ವಿಷಯವು ಈ ಪ್ರಕಾರವಿರಬೇಕು. ಮದ್ರಾಸಿನಲ್ಲಿ ಹಿಂದೂ ಸಮಾಜಕ್ಕೆ ಸೇರಿದವರಾರು ನನ್ನನ್ನು ಅಮೇರಿಕಕ್ಕೆ ಕಳುಹಿಸಿದರೋ ಅವರಿಗೆ ನಾನಿಲ್ಲಿ ಮಾಡಿರುವ ಕಾರ್ಯದಲ್ಲಿ ಸಂಪೂರ್ಣ ಸಂತೋಷ ಉಂಟಾಗಿರುವುದೆಂದು ಮುಂತಾಗಿ.

ಅವಕಾಶವಿದ್ದರೆ ಮುಂದೆ ಹೇಳುವುದನ್ನು ಮಾಡುವ ಪ್ರಯತ್ನವನ್ನು ಕೈಕೊಳ್ಳಿರಿ. ಇಷ್ಟು ಒಳ್ಳೆಯ ಕಾರ್ಯವು ಇನ್ನಿಲ್ಲ. ಎಲ್ಲ ಸ್ಥಳಗಳಿಂದಲೂ ಸಾಧ್ಯವಾದಷ್ಟುಗೆ ನಮ್ಮ ಕಾರ್ಯ ವಿಷಯದಲ್ಲಿ ಸಹಾನುಭೂತಿ ಪ್ರಕಾಶ ಪತ್ರಗಳನ್ನು ಸಂಗ್ರಹಿಸಿ, ಅವುಗಳನ್ನು ಮುದ್ರಿಸಿ, ಪ್ರತಿಗಳನ್ನು ಬೇಗನೆ ಅಮೆರಿಕದ ವೃತ್ತಾಂತ ಪತ್ರಿಕೆಗಳಿಗೆ ಕಳುಹಿಸುವುದು. ಎಲಾ ಹುಡುಗರಿರಾ! ಇದರಿಂದ ಬಹು ದೂರ ನಮ್ಮ ಕಾರ್ಯಸಿದ್ಧಿಯಾಗುತ್ತದೆ. ಇಲ್ಲಿಯ ಬ್ರಾ....ಸಮಾಜದವರು ಬಾಯಿಗೆ ಬಂದುದನ್ನು ಹೇಳುತ್ತಿದ್ದಾರೆ. ನೀವು ಎಷ್ಟು ತ್ವರೆ ಮಾಡಿದರೆ ಅಷ್ಟು ಬೇಗನೆ ಅವರ ಬಾಯಿ ಕಟ್ಟಿಹೋಗುತ್ತದೆ. ಸನಾತನ ಹಿಂದೂ ಧರ್ಮಕ್ಕೆ ಜಯವಾಗಲಿ ಮಿಥ್ಯಾವಾದಿಗಳೂ ಪಾಷಂಡಿಗಳೂ ಪರಾಭೂತರಾಗಲಿ. ಏಳಿರಿ! ಎದ್ದೇಳಿರಿ! ಹುಡುಗರಿರಾ! ನಮ್ಮ ಜಯ ನಿಶ್ಚಯ. ನನ್ನ ಪತ್ರಗಳನ್ನು ಬಯಲು ಮಾಡುವ ವಿಷಯದಲ್ಲಿ ನಾನು ಹೇಳತಕ್ಕುದು ಇದೀಗ. ನಾನು ಭಾರತ ವರ್ಷಕ್ಕೆ ಹಿಂದಿರುಗಿ ಬಾರದಿರುವವರೆಗೆ ಅವುಗಳಲ್ಲಿ ಎಷ್ಟು ಅಂಶವನ್ನು ಪ್ರಕಾಶಪಡಿಸುವುದಕ್ಕೆ ಉಚಿತವೋ ಅಷ್ಟು ಮಾತ್ರವೇ ನಮ್ಮ ಗೆಳೆಯರ ಗುಂಪಿಗೆ ತಿಳಿಸುವುದು. ನಾವು ಕಾರ್ಯವನ್ನು ಆರಂಭಿಸಿದರೆ ಸಾಕು, ನಮ್ಮನ್ನು ದೇಶವೇ ಬಹಳವಾಗಿ ಕೊಂಡಾಡುವುದು. ಆದರೆ ಕಾರ್ಯ ಮಾಡದೆ ಮಾತನಾಡಲು ನನಗಿಷ್ಟವಿಲ್ಲಪ್ಪ.

ಇದೇನು ಸರಿಯೋ ಏನೋ ಹೇಳಲಾರೆ. ಆದರೆ ಕಲ್ಕತ್ತೆಯಲ್ಲಿ ಗಿರೀಶ, ಎಂ, ಮಿತ್ರ, ನಮ್ಮ ಗುರುದೇವನ ಭಕ್ತಾದಿಗಳು ಇವರ ಮೂಲಕ ಈ ಬಗೆಯ ಸಭೆಯನ್ನು ಕೂಡಿಸುವುದಕ್ಕಾಗುವುದೆಂದು ನನ್ನ ಬುದ್ಧಿಗೆ ತೋರುತ್ತದೆ. ಆಗುವ ಪಕ್ಷಕ್ಕೆ ಬಹಳ ಒಳ್ಳೆಯದು. ಕಲ್ಕತ್ತೆಯಲ್ಲಿ ಸಭೆ ಸೇರಿಸುವುದಕ್ಕೆ ಅವರಿಂದಾದರೆ ಇದರಂತೆಯೇ ಪ್ರಸ್ತಾಪವನ್ನೆತ್ತಿ ಕಳುಹಿಸತಕ್ಕುದೆಂದು ಹೇಳುವುದು. ನನ್ನ ಕಾರ್ಯ ವಿಷಯದಲ್ಲಿ ಸಹಾನುಭೂತಿಯುಳ್ಳವರು ಕಲ್ಕತ್ತೆಯಲ್ಲಿ ಸಾವಿರಾರು ಮಂದಿ ಇದ್ದಾರೆ.

ಇನ್ನು ಹೆಚ್ಚಾಗಿ ಬರೆಯುವ ವಿಶೇಷವೇನೂ ಇಲ್ಲ. ನನ್ನ ಸ್ನೇಹಿತರುಗಳೆಲ್ಲರಿಗೂ ತನ್ನ ಸಾದರ ಭಾಷಣಗಳನ್ನು ತಿಳಿಸುವುದು. ನಾನು

ಸತತವೂ ಅವರ ಮಂಗಳ ಪ್ರಾರ್ಥನೆಯನ್ನು ಮಾಡುತ್ತೇನೆ.

ಆಶೀರ್ವಾದಕ

ವಿವೇಕಾನಂದ

ಕಾ. ಕಂ. ಜೋಕೆ, ಪತ್ರ ಬರೆಯುವಾಗ್ಗೆ ನನ ಹೆಸರಿನ ಹಿಂದೆ (His Holiness) ಎಂದು ಬರೆಯಕೂಡದು. ಹಾಗೆ ಬರೆದರೆ ಇಲ್ಲಿ ಅದೆಂತಹ ಭೂತ, ಅದರ ಆಕಾರವೆಂತಹದೆಂಬ ಸಮಾಚಾರವು ಹುಟ್ಟುತ್ತದೆ ಹೆಚ್ಚಾಗಿ.

ಇತಿ. ವಿ.

ನ್ಯೂಯಾರ್ಕ್,

೧೮ನೆಯ ನವೆಂಬರು ೧೮೯೪.

ಅಯ್ಯಾ,

ಕಲ್ಕತ್ತೆಯ ಪೌರಸಭಾಮಂದಿರದಲ್ಲಿ ನೆರೆದಿದ್ದ ಸಭೆಯಿಂದಂಗೀಕೃತ ವಾದ ಠರಾವುಗಳೂ, ನನ್ನ ಊರಿನವರು ನನ್ನ ವಿಷಯದಲ್ಲಿ ವಿಶದಪ ಡಿಸಿದ ಸವಿನುಡಿಗಳೂ ತಲುಪಿದುವು.

ಹೇ! ಮಹಾಶಯ! ನಾನು ಮಾಡಿದ ಅಲ್ಪಸೇವೆಯನ್ನು ತಾವು ಮೆಚ್ಚಿದುದಕ್ಕಾಗಿ ನಾನು ಅತ್ಯಂತ ಮನಃಪೂರ್ವಕವಾಗಿ ಅರ್ಪಿಸುವ ಕೃತಜ್ಞತೆಯನ್ನು ಸ್ವೀಕರಿಸಬೇಕು ತಾವು.

ವ್ಯಕ್ತಿಯಾಗಲಿ, ಜಾತಿಯಾಗಲಿ (ವ್ಯಕ್ತಿ ಸಮುದಾಯ) ಇತರರ ಸಂಪರ್ಕವಿಲ್ಲದೆ ಬೇರೆಯಾಗಿ ಜೀವಿಸಲಾಗುವುದಿಲ್ಲವೆಂಬುದು ನನ್ನ ದೃಢ ವಾದನಂಬಿಕೆ. ದೊಡ್ಡಸ್ತಿಕೆ, ನೀತಿ (policy), ಪವಿತ್ರತೆ, ಇವುಗಳ ವಿಷಯಗಳಲ್ಲಿ ತಪ್ಪು ತಿಳಿವಳಿಕೆಯಿಂದ ಈ ಪ್ರಕಾರ ನಡೆದಾಗಲೆಲ್ಲಾ ಬೇರೆಯಾದವರಿಗೆ ಅನರ್ಥಗಳೇ ಫಲ

ಭಾರತವರ್ಷದ ಅವನತಿಗೂ ಕುಲಗೇಡಿತನಕ್ಕೂ ನಮ್ಮವರು ತಮ್ಮ ಸುತ್ತಲೂ ಪದ್ಧತಿ ಎಂಬ ಗೋಡೆಯನ್ನು ಪರದ್ವೇಷವೆಂಬ ತಳಹದಿಯ ಮೇಲೆ ಎಬ್ಬಿಸಿದುದೇ ಮುಖ್ಯವಾದೊಂದು ಕಾರಣವೆಂದು ತೋರುತ್ತದೆ

ನನಗೆ. ಸುತ್ತಲಿರುವ ಬೌದ್ಧ ಜಾತಿಯವರೊಡನೆ ಹಿಂದೂಗಳಿಗೆ ಪೂರ್ವಕಾಲದಲ್ಲಿ ಸಂಪರ್ಕವನ್ನು ತಪ್ಪಿಸುವುದೇ ಇದರ ನಿಜವಾದ ಉದ್ದೇಶ.

ಈ ವಿಷಯವನ್ನು ಮುಚ್ಚಿಡಲು ಪ್ರಾಚೀನ ಅಥವಾ ಆಧುನಿಕ ಕುತರ್ಕವು ಯಾವಬಗೆಯ ಮುಸುಕನ್ನು ಬೇಕಾದರೂ ಅದರ ಮೇಲಳೆಯಲು ಪ್ರಯತ್ನಪಡಲಿ, ತಪ್ಪಿಸಿಕೊಳ್ಳಲಾಗದ ಫಲ (ತಾನು ಕೆಡದೆ ಪರರನ್ನು ದ್ವೇಷಿಸಲಾಗುವುದಿಲ್ಲವೆಂಬ ನೈತಿಕನ್ಯಾಯಸಮರ್ಥನ) ವೇನಪ್ಪ ಎಂದರೆ, ಪೂರ್ವಕಾಲದ ಜಾತಿಗಳಲ್ಲಿ ಅತ್ಯಂತ ಮುಂದಾಗಿದ್ದ ಜಾತಿಯು ಎಲ್ಲ ಜನಗಳ ತಿರಸ್ಕಾರಕ್ಕೆ ಗುರಿಯಾಗಿರುವುದೀಗ. ನಮ್ಮ ಹಿಂದಣವರು ಯಾವ ನಿಯಮವನ್ನು ಮೊದಲು ಕಂಡು ಹಿಡಿದು ಅದನ್ನು ವ್ಯವಹಾರದಲ್ಲಿ ವಿವೇಕದಿಂದ ತಂದರೋ ಅದರ ಉಲ್ಲಂಘನೆಗೆ ನಾವು ದೃಷ್ಟಾಂತ.

ದಾನ–ಪ್ರತಿಗ್ರಹ (ಕೊಡು, ತೆಕೋ) ಇದೇ ನ್ಯಾಯ, ಇದೇ ನಿಯಮ. ಭಾರತ ವರ್ಷವು ಮರಳಿ ಎದ್ದು, ಉನ್ನತಿಯನ್ನು ಪಡೆಯಬೇಕೆಂಬ ಆಸೆ ಇದ್ದ ಪಕ್ಷದಲ್ಲಿ, ಭಾರತಮಾತೆಯು ತನ್ನ ಬೊಕ್ಕಸವನ್ನು ಬಿಚ್ಚಿ ಅದರಲ್ಲಿರುವ ರತ್ನಗಳನ್ನು ಈ ಪೃಥ್ವಿಯ ಮೇಲಣ ಜನಾಂಗಗಳಲ್ಲಿ ಎರಚಿ, ಇದಕ್ಕೆ ಪ್ರತಿಯಾಗಿ ಇತರರು ತನಗೆ ಯಾವುದನ್ನು ಕೊಡುವರೋ ಅದನ್ನು ಸ್ವೀಕರಿಸಲು ಸನ್ನದ್ಧಳಾಗಿರಬೇಕಾದುದು ಪರಮಾವಶ್ಯಕ. ಹಿಗ್ಗೋಣವೇ ಜೀವ, ಕುಗ್ಗೋಣವೇ ಸಾವು. ಪ್ರೇಮವೇ ಪ್ರಾಣ, ದ್ವೇಷವೇ ಮೃತ್ಯು. ಇತರ ಜಾತಿಗಳನ್ನು ದ್ವೇಷಿಸಲು ನಾವೆಂದು ಮೊದಲು ಮಾಡಿದೆವೋ, ಅಂದೇ ನಮ್ಮ ಸಾವಿಗೆ ಮೊದಲು. ಪ್ರಾಣವೇ ಆದಂಥ ಹಿಗ್ಗೋಣ (ಹೃದಯವಿಸ್ತಾರ) ವನ್ನು ನಾವು ಮರಳಿ ಆಶ್ರಯಿಸದಿದ್ದರೆ ತಡೆಯರಾರೂ ನಮ್ಮ ಸಾವನ್ನು.

ಆದುದರಿಂದ ಈ ಪೃಥ್ವಿಯ ಸಕಲ ಜಾತಿಯವರೊಡನೆಯೂ ಕಲೆಯಬೇಕು ನಾವು. ವಿದೇಶ ಯಾತ್ರೆ ಹೋಗುವ ಪ್ರತಿಯೊಬ್ಬ ಹಿಂದುವೂ ಮೂಢಶ್ವಾಸ, ಸ್ವಾರ್ಥಪರತೆ, ಇವುಗಳ ಕಂತೆಗಳಾಗಿ ತಾವೂ ಅನುಭವಿಸದೆ ಇತರರನ್ನೂ ಅನುಭವಿಸಗೊಡಿಸದೆ ಗೊಂತಿಗೆಯೊಳಗೆ ಸೇರಿಕೊಂಡಿ

ರುವ ನಾಯಂತಿರುವುದೇ (ನಾಯಿ ಗೊಂತಿಗೆಯಲ್ಲಿರುವ ಹುಲ್ಲನ್ನು ತಾ ನೂ ತಿನ್ನುವುದಿಲ್ಲ ಆಕಳನ್ನೂ ತಿನ್ನಗೊಡಿಸುವುದಿಲ್ಲ) ಯಾರ ಜೀವನದ ಮುಖ್ಯೋದ್ದೇಶವಾಗಿ ತೋರುವುದೋ ಅಂತಹ ನೂರಾರು ಮಂದಿಗಿಂತ ಲೂ ತನ್ನ ದೇಶಕ್ಕೆ ಅಧಿಕ ಪ್ರಯೋಜನವನ್ನುಂಟುಮಾಡುವನು.

ಪಾಶ್ಚಾತ್ಯ ಜಾತಿಗಳು ಎಬ್ಬಿಸಿರುವ ತಮ್ಮ ಜಾತಿ ಜೀವನದ ಅದ್ಭು ತವಾದ ಪ್ರಾಸಾದಗಳಿಗೆ ಆಶ್ರಯವಾವುದೆಂದರೆ ಚಾರಿತ್ರ (ನಲ್‌ನಡೆ) ಎಂಬ ಬಲವಾದ ಸ್ತಂಭಗಳು. ಅಂತಹ ಕಂಬಗಳನ್ನು ನಾವು ಕಟ್ಟುವವರೆಗೆ ಆ ಶಕ್ತಿ, ಈ ಶಕ್ತಿ ಎಂದರೆ ಆ ಈ ಅಧಿಕಾರಿಗಳಿಗೆ ವಿರೋಧವಾಗಿ ಸಿಟ್ಟು ಗೊಂಡು ರೇಗುವುದು ವ್ಯರ್ಥ.

ಸ್ವಾಧೀನತೆಯನ್ನು ಇತರರಿಗೆ ಕೊಡಲು ಹಿಂಜರಿಯುವವರು ಸ್ವ ಯಂ ಸ್ವಾಧೀನತೆಯನ್ನು ಪಡೆಯಲು ಅರ್ಹರೆ! ನಿಷ್ಪ್ರಯೋಜಕವಾದ ಕೋಪದಲ್ಲಿ ನಮ್ಮ ಶಕ್ತಿಯನ್ನು ವ್ಯಯಮಾಡದೆ ಶಾಂತ ಮನಸ್ಸಿನೊಡನೆ ಗಂಡಸಿಗೆ ತಕ್ಕಂತೆ ಕಾರ್ಯಕ್ಕೆ ಕೈ ಹಾಕೋಣ. ಯಾವಾತನಾದರೆ ಯಾವುದನ್ನು ಪಡೆಯಲು ಯೋಗ್ಯನೋ ಅಂಥವನು ಅದನ್ನು ಪಡೆಯುವು ದಕ್ಕೆ ಈ ಜಗತ್ತಿನಲ್ಲಿ ಯಾವ ಶಕ್ತಿಯೂ ಅಡ್ಡಿಯಾಗಲಾರದೆಂಬುದು ನನ್ನ ಸಂಪೂರ್ಣ ವಿಶ್ವಾಸ. ನಮ್ಮ ಹಿನ್ನು (ಹಿಂದಣ ಕಾಲ) ಮಹತ್ತಾಗಿದ್ದು ದೇನೋ ನಿಸ್ಸಂಶಯ. ಆದರೆ ನಮ್ಮ ಮುನ್ನು (ಮುಂದಣ ಕಾಲ) ಇ ನ್ನೂ ಅಧಿಕ ಶೋಭಾಯಮಾನವಾಗಿರುವುದೆಂಬುದು ನನ್ನ ಮನಃಪೂ ರ್ವಕವಾದ ನಂಬಿಕೆ. ನಮ್ಮ ಪವಿತ್ರತೆ, ತಾಳ್ಮೆ, ಅಧ್ಯವಸಾಯ–ಇವು ಅಚಲವಾಗಿರುವಂತೆ ಶ್ರೀ ಶಂಕರನು ಕರುಣಿಸಲಿ.

ತಮ್ಮ ವಶವರ್ತಿ,

ವಿವೇಕಾನಂದ.

೩ನೆಯ ನವೆಂಬರು ೧೮೯೪.

ಪ್ರಿಯ ಮ..............

ನಮ್ಮ ಧರ್ಮಸಂಘದ ಉದ್ದೇಶಗಳ ವ್ಯಾವಹಾರಿಕ ಭಾಗದಲ್ಲಿ ನಮ್ಮ ಬಲಗಳನ್ನು ವ್ಯವಸ್ಥೆಗೊಳಿಸತಕ್ಕುದು. ಆದರೆ ಧರ್ಮ ವಿಷಯಗ

ಳಲ್ಲಿ ಮಾತ್ರ ನೂತನ ಸಂಪ್ರದಾಯ ಹುಟ್ಟುವುದಕ್ಕೆ ಅವಕಾಶ ಕೊಡದಂತೆ ನಡೆಸು ಕೊಳ್ಳಬೇಕು.

ಶ್ರೀ ರಾಮಕೃಷ್ಣ ಪರಮಹಂಸರು ಯಾವುದನ್ನು ಮಾಡುವುದಕ್ಕಾಗಿ ಮತ್ತಾವುದನ್ನು ಬೋಧಿಸುವುದಕ್ಕಾಗಿ ಅವತರಿಸಿದರು ಎಂಬುದನ್ನು ನಿಶದಪಡಿಸುವುದಕ್ಕೋಸ್ಕರ ಅವರ ನಿಜವಾದ ಚರಿತೆಯನ್ನು ಯಾರಾದರೂ ಬರೆಯುವುದಾದರೆ ಬರೆಯಲಿ. ಹಾಗಿಲ್ಲದ ಪಕ್ಷಕ್ಕೆ ಅವರ ಜೀವನ ಚರಿತೆಗೂ ಅವರ ತತ್ವಬೋಧೆಗೂ ಅಪಾರ್ಥವನ್ನು ಕಲ್ಪಿಸದೆ ಇರಲಿ.....ಅವರು ಪರಮ ಹಂಸರ ಪ್ರೇಮ, ಅವರ ಜ್ಞಾನ, ಅವರ ತತ್ವಬೋಧೆ ಮುಂತಾದುವುಗಳನ್ನು ವ್ಯವಹಾರದಲ್ಲಿ ಆಚರಿಸಿ ತೋರಿಸಲಿ. ಯಾವುದರ ಜ್ಯೋತಿಯಲ್ಲಿ ಹಿಂದೂ ಧರ್ಮದ ಸಮಸ್ತ ಉದ್ದೇಶಗಳನ್ನು ನಾವು ನಿಜವಾಗಿಯೂ ಅರಿಯಲಾಗುವುದೋ ಅಂತಹ ಅಸಾಧಾರಣವಾದೊಂದು ಅನ್ವೇಷಣ ದೀಪದಂತೆ ಪರಮಹಂಸರ ಚರಿತೆ. ಶಾಸ್ತ್ರಗಳಲ್ಲಿ ಉಕ್ತವಾಗಿರುವ ಸಕಲ ವಿದ್ಯೆಗೂ (Theoretical knowledge) ಅವರು ವ್ಯಾವಹಾರಿಕ ನಿದರ್ಶನ. ನಮ್ಮ ಋಷಿಗಳ ನಮ್ಮ ಅವತಾರ ಪುರುಷರ ಬೋಧನೆಯ ನಿಜವಾದ ಉದ್ದೇಶವನ್ನು ಅವರು ತಮ್ಮ ಜೀವಯಾತ್ರೆಯಲ್ಲಿ ತೋರಿಸಿದರು. ಪುಸ್ತಕಗಳೇನು! ಬರೀ ಸಿದ್ಧಾಂತಗಳು. ಅವರಾದರೋ ಸಿದ್ಧರು. (The books were theories, he was the realisation). ಐದು ಸಾವಿರ ವರುಷಗಳ ನಮ್ಮ ಜಾತೀಯ ಆಧ್ಯಾತ್ಮಿಕ ಜೀವನವನ್ನು ಅವರು ತಮ್ಮ ಜೀವಮಾನವಾದ ಐವತ್ತುನಾಲ್ಕು ವರುಷಗಳಲ್ಲಿ ಅಡಗಿಸಿ, ಜಗತ್ತಿಗೆಲ್ಲಾ ಪ್ರಕಟಿಸಿ, ನಮ್ಮ ಮುಂದಣವರಿಗೆ ಮೇಲ್ಪಙ್ತಿಯನ್ನಿಟ್ಟು ಉಚ್ಚಸ್ಥಾನದಲ್ಲಿ ನಿಂತರು. ಅವರು ಸ್ಥಾಪಿಸಿದ ಅವಸ್ಥಾ ಸಿದ್ಧಾಂತದ ಮೂಲಕ ಮಾತ್ರವೇ ವೇದವನ್ನು ಸ್ಪಷ್ಟೀಕರಿಸುವುದಕ್ಕೂ ವೇದಗಳಿಗೂ ಶಾಸ್ತ್ರಗಳಿಗೂ ಸಮಾಧಾನವನ್ನು ಕಲ್ಪಿಸುವುದಕ್ಕೂ ಸಾಧ್ಯವು. ಇತರರಲ್ಲಿ ಸಹನವನ್ನು ತೋರಿಸುವುದಲ್ಲದೆ ಅವರನ್ನು ನಿಜವಾಗಿಯೂ ಅಪ್ಪಿಕೊಳ್ಳಬೇಕು. ಎಲ್ಲ ಧರ್ಮಗಳಿಗೂ ಸತ್ಯವೇ ತಳಹದಿ ಎಂಬುದು ಅವರ ಸಿದ್ಧಾಂತ ಈ ಪ್ರಕಾರವಾಗಿ ಅತ್ಯಂತ ಚಿತ್ತಾಕರ್ಷಕವೂ ಸುಂದರವೂ ಆದ ಅವರ ಜೀವನ ಚರಿತೆಯನ್ನು ಬರೆಯಲು ಸಾಧ್ಯವು....

ಒಳ್ಳೆಯದು! ಎಲ್ಲಕ್ಕೂ ಕಾಲ ಬರಬೇಕು. ಸ್ವತಂತ್ರವಾಗಿ ಮುಂದರಿಸು ನಿನ್ನ ಕಾರ್ಯವನ್ನು............." ಅಡುಗೆಯಾದ ಮೇಲೆ ಊಟಕ್ಕೆ ಕುಳಿತುಕೊಳ್ಳುವರು ಅನೇಕರು." ಜೋಕೆ. ಕಾರ್ಯನಡೆಯಿಸು.

ಆಶೀರ್ವಾದಗಳೊಡನೆ ಸಂತತವೂ
ನಿನ್ನವನೇ ಆದ,
ವಿವೇಕಾನಂದ.

---

೩೦ನೆಯ ನವೆಂಬರ್ ೧೮೯೪

ಪ್ರಿಯ ಕ...............

.................ಶ್ರೀ ರಾಮಕೃಷ್ಣ ಪರಮಹಂಸರ ವಿಷಯದಲ್ಲಿ ಪ್ರಕಟವಾಗಿರುವ ಅದ್ಭುತ ಕಥೆಗಳ ಮತ್ತವುಗಳನ್ನು ಬರೆಯುವ ಮೂರ್ಖರ ಗೊಡವೆಗೆ ಹೋಗದಿರು. ಅವೇನೋ ನಿಜ. ಆದರೆ ಮೂರ್ಖರು ಅವೆಲ್ಲವನ್ನೂ ಕೆಡಿಸಿ ಹೊಲಸು ಮಾಡಿ ಬಿಡುವರೆಂಬುದು ನನ್ನ ದೃಢ ವಿಶ್ವಾಸ. ಜನಗಳ ಬೋಧನೆಗಾಗಿ ಅವರ ಜ್ಞಾನ ಈ ಜಗತ್ತಿನಷ್ಟು ವಿಶಾಲವಾಗಿದ್ದಿತು. ಹೀಗಿರಲು, ಅನಾವಶ್ಯಕಗಳಾದುವುಗಳಿಗೆ (ಅದ್ಭುತಗಳು ನಿಜವಾಗಿಯೂ ಅನಾವಶ್ಯಕಗಳು) ಪ್ರಾಧಾನ್ಯ ಕೊಡುವುದೇಕೆ? ಅವೇನನ್ನೂ ಪ್ರತಿಪಾದಿಸುವುದಿಲ್ಲ. ಜಡವಾದುದು ಚೈತನ್ಯದ ಅಸ್ತಿತ್ವವನ್ನು ಪ್ರತಿಪಾದಿಸದು. ಭಗವಂತ, ಆತ್ಮ, ಅಮೃತತ್ವ ಇವುಗಳ ಅಸ್ತಿತ್ವಕ್ಕೂ ಪವಾಡಗಳನ್ನು ತೋರಿಸುವುದಕ್ಕೂ ಸಂಬಂಧವೆಲ್ಲಿಯದು! ಶ್ರೀ ಪರಮಹಂಸರೇನೆಂಬುದನ್ನು ಮಾತ್ರ ಬೋಧನೆ ಮಾಡು. ನಿನ್ನ ನೀರಡಿಕೆಯನ್ನು ತಣಿಸಿದ ಜಲ ಪಾತ್ರವನ್ನು ಮುಂದರಿಸಿ ಇತರರಿಗೆ ನೀಡು. ಆಧ್ಯಾತ್ಮಿಕ ಪ್ರಲಾಪವನ್ನು ತಲೆಗೆ ಹಚ್ಚಿಕೊಳ್ಳದಿರು. ನಿನ್ನ ಮತಾಭಿಮಾನದಿಂದ ಇತರರಿಗೆ ತೊಂದರೆ ಕೊಡದಿರು.

ಆಶೀರ್ವಾದಗಳೊಡನೆ
ಸತತವೂ ನಿನ್ನವನಾದ,
ವಿವೇಕಾನಂದ

ಜಾರ್ಜ್ ಡಬ್ಲ್ಯು. ಹೇಲ್.
೫೪೧, ಡಿಯರ್‌ಬರಣ ಅವೆನ್ಯೂ,
ಷಿಕಾಗೋ,
೧೯ನೆಯ ಮಾರ್ಚ, ೧೮೯೪.

ಎನ್ನ ಪ್ರಿಯ...............

ಈ ದೇಶಕ್ಕೆ ಬಂದಂದಿನಿಂದ ಪತ್ರವನ್ನು ಬರೆಯಲಿಲ್ಲ ನಿನಗೆ. ಆದರೂ ಹರಿದಾಸ ಭಾಯಿ ಅವರ ಪತ್ರ ದ್ವಾರಾ ಸಕಲ ಸಮಾಚಾರವನ್ನೂ ತಿಳಿಯಲಾಯಿತು. ಗಿರೀಶ ಚಂದ್ರಘೋಷರೂ ನೀವೂ ಹರಿದಾಸಭಾಯಿ ಅವರಿಗೆ ಯಥೋಚಿತವಾಗಿ ಮರ್ಯಾದೆ ಮಾಡಿದುದು ಬಲು ಒಳ್ಳೆಯದು.

ಈ ದೇಶದಲ್ಲಿ ನನಗಾವ ಕೊರತೆಯೂ ಇಲ್ಲ. ಆದರೆ ತಿರುಪೆ ಎತ್ತುವುದು ಇಲ್ಲಿ ವಾಡಿಕೆ ಇಲ್ಲವಾದುದರಿಂದ ನಾನು ಕೆಲಸ ಮಾಡುತ್ತೇನೆ ಎಂದರೆ, ಇಲ್ಲಲ್ಲಿ ಉಪದೇಶ ಮಾಡುತ್ತೇನೆ. ಇಲ್ಲಿ ಬಿಸಿಲು ಎಷ್ಟು ಹೆಚ್ಚೋ ಚಳಿಯೂ ಅಷ್ಟು ಹೆಚ್ಚು. ಇಲ್ಲಿಯ ತಾಪವು ಕಲ್ಕತ್ತೆಯದಕ್ಕಿಂತ ಎಷ್ಟು ಅಂಶವೂ ಕಡಮೆಯಿಲ್ಲ. ಚಳಿಯ ವಿಷಯವನ್ನು ಏನೆಂದು ಹೇಳಲಿ! ದೇಶವೆಲ್ಲ ಎರಡು ಮೂರು, ಕೆಲವೆಡೆ ನಾಲ್ಕೈದು ಅಡಿಗಳ ಮಂದ ಹಿಮದಿಂದ ಮುಚ್ಚಿಹೋಗುತ್ತದೆ. ದಕ್ಷಿಣ ಭಾಗದಲ್ಲಿ ಹಿಮ ಬೀಳುವುದಿಲ್ಲ. ಹಿಮವೇನೊಂದು ದೊಡ್ಡ ವಿಷಯವಲ್ಲ ಇಲ್ಲಿ. ಉಷ್ಣಮಾಪಕದ ಪಾದರಸವು ಜೀರೋವಿಗೆ ಮೇಲೆ ೩೨° ಇರುವಾಗ ಹಿಮ ಬೀಳುತ್ತದೆ. ಕಲ್ಕತ್ತೆಯಲ್ಲಿ ಜೀರೋವಿಗೆ ಮೇಲೆ ೬೦° ಇರುತ್ತದೆ ಯಾವಾಗಲೂ. ಇಂಗ್ಲಾಂಡಿನಲ್ಲಿ ಜೀರೋ ಸಮೀಪಕ್ಕೆ ಎಂದೋ ಹೋಗುತ್ತದೆ. ಇಲ್ಲಾದರೋ ಜೀರೋ ಕೆಳಗೆ ४०, ೫೦° ತನಕ ಇಳಿದು ಹೋಗುತ್ತದೆ. ಉತ್ತರಭಾಗವಾದ ಕಾನಡದಲ್ಲಿ ಪಾದರಸವು ಹೆಪ್ಪುಗಟ್ಟುತ್ತದೆ. ಆಗ ಆಲ್‌ಕೊಹಾಲ್ ಉಷ್ಣಮಾಪಕವನ್ನು ಉಪಯೋಗಿಸುತ್ತಾರೆ. ಚಳಿ ಬಹಳವಾಗಿ ಪಾದರಸವು ಜೀರೋವಿನ ಮೇಲೆ ೨೦° ಕೆಳಗಿರುವಾಗ ಹಿಮ ಬೀಳುವುದಿಲ್ಲ. ಬಹಳ ಚಳಿಯಾದ ದಿವಸ ಹಿಮ ಬೀಳುತ್ತದೆಂದು ನಾನು ತಿಳಿದುಕೊಂಡಿದ್ದೆನು; ಹಾಗಲ್ಲ. ಸಾಮಾನ್ಯವಾಗಿ ಕೊಂಚ ತಾಪ ಹೆಚ್ಚಾದ

ದಿವಸ ಹಿಮ ಬೀಳುವುದುಂಟು. ಚಳಿ ಬಹಳ ಹೆಚ್ಚಿದರೆ ಒಂದು ಬಗೆಯ ಮತ್ತ್ಯಂಟಾಗುತ್ತದೆ. ಗಾಡಿಹೋಗದು; ಚಕ್ರವಿಲ್ಲದ ಗಾಡಿ ಹಿಮದಮೇಲೆ ಜಾರಿಕೊಂಡು ಹೋಗುವುದು. ಎಲ್ಲವೂ ಬಿರತುಕೊಂಡು ಗಟ್ಟಿಯಾಗುತ್ತದೆ. ನದಿ ನಾಲೆ ಕೆರೆ ಇವುಗಳ ಮೇಲೆ ಆನೆ ನಡೆಯಬಹುದು ಅವು ಅಷ್ಟು ಗಟ್ಟಿಯಾಗುತ್ತವೆ. ನಯಾಗರಾ ಜಲಪಾತದ (ಚುಂಚು) ಹುಚ್ಚು ಹೊಳೆಯು ಕಲ್ಲಿನ ಹಾಗೆ ಗಟ್ಟಿಯಾಗುತ್ತದೆ. ಆದರೂ ನಾನೇನೋ ಸ್ವಸ್ಥನಾಗಿದ್ದೇನೆ. ಮೊದಲೇನೋ ಭಯವಾಗಿದ್ದಿತು; ತರುವಾಯ ಆವಶ್ಯಕತೆ ಬಿದ್ದುದರಿಂದ ರೈಲಿನಲ್ಲಿ ಕುಳಿತು ಒಂದು ದಿವಸ ಕಾನಡ ಸಮೀಪಕ್ಕೆ ಹೋಗಿ ಎರಡನೆಯ ದಿವಸ ದಕ್ಷಿಣ ಅಮೆರಿಕದಲ್ಲಿ ಉಪನ್ಯಾಸ ಮಾಡುವುದಕ್ಕೆ ಹೊರಟೆನು. ರೈಲ್ ಗಾಡಿಯ ಒಳಗಡೆ ಚಳಿಗಾಗಿ ಮನೆಯಲ್ಲಿರುವಂತೆ ಉಗಿ ಕೊಳವಿಯಿಂದ ಬೆಚ್ಚಗೆ ಮಾಡಿರುವುದು. ಹೊರಗಡೆ ನಾಲ್ಕು ದೆಸೆಗಳಲ್ಲಿಯೂ ಹಿಮರಾಶಿ. ಅದೆಷ್ಟು ಸೊಗಸೋ!

ನನ್ನ ಕಿವಿ ಮೂಗುಗಳು ಕಳಚಿ ಬಿದ್ದು ಹೋಗುವುವೆಂಬ ಅಂಜಿಕೆ ಬಹಳವಾಗಿದ್ದಿತು. ಆದರೆ ಇದುವರೆಗೆ ಏನೂ ಆಗಿಲ್ಲ. ಒಂದರ ಮೇಲೊಂದು ಬೆಚ್ಚನೆ ಹೊದಿಕೆ, ಅದರ ಮೇಲೆ ಕೂದಲಿರುವ ಚರ್ಮದ ಕೋಟು, ಬೂಟ್ಸು, ಅದರ ಮೇಲೆ ಉಣ್ಣೆಯ ಬೂಟ್ಸು ಇಷ್ಟು ತೊಟ್ಟು ಹೊರಗೆ ಹೊರಡಬೇಕು. ಉಸಿರು ಬಿಡುವುದೇ ತಡ, ಅದು ದಾಡಿ ಮೀಸೆಗಳಲ್ಲಿ ಘನೀಭವಿಸುತ್ತದೆ. ಆದರೆ ತಮಾಷೆ ಏನು ಬಲ್ಲೆಯೋ? ಮನೆಯಲ್ಲಿ ನೀರಿಗೆ ನೀರ್ಗಲ್ಲು ಗಡ್ಡೆಯೊಂದು ಹಾಕದೆ ನೀರು ಕುಡಿಯುವುದಿಲ್ಲ. ಮನೆಯೊಳಗೆ ಬೆಚ್ಚಗಿರುವುದಷ್ಟೆ! ಅದಕ್ಕಾಗಿಯೇ. ಪ್ರತಿಯೊಂದು ಕೋಣೆಯನ್ನೂ ಮಹಡಿ ಹತ್ತುವ ಮೆಟ್ಟಲುಗಳನ್ನೂ ಉಗಿಕೊಳವಿಗಳಿಂದ ಬೆಚ್ಚಗಿಟ್ಟಿರುತ್ತಾರೆ. ಕಲಾ ಕೌಶಲದಲ್ಲಿ ಅದ್ವಿತೀಯರು ಇವರು; ಭೋಗ ವಿಲಾಸಗಳಲ್ಲಿ ಅದ್ವಿತೀಯರು; ದುಡ್ಡು ಸಂಪಾದಿಸುವುದರಲ್ಲಿ ಅದ್ವಿತೀಯರು; ಖರ್ಚು ಮಾಡುವುದರಲ್ಲಿಯೂ ಅದ್ವಿತೀಯರು. ಇಲ್ಲಿ ಜಂಗೂಲಿಯವನಿಗೆ ದಿನ ಒಂದಕ್ಕೆ ಆರು ರೂಪಾಯಿ ಕೂಲಿ; ಚಾಕರನಿಗೂ ಅಷ್ಟೇ. ಮೂರು ರೂಪಾಯಿಗಳಿಗೆ ಕಡಮೆ ಬಾಡಿಗೆ ಗಾಡಿ ಸಿಕ್ಕದು. ನಾಲ್ಕಾಣೆಗೆ ಕಡಮೆ ಒಂದು ಚುಟ್ಟಾ ಸಿಕ್ಕದು. ಸುಮಾ

ರಾಗಿರುವ ಬೂಟ್ಸು ಜತೆ ಒಂದಕ್ಕೆ ೨೪ ರೂ. ಪೋಷಾಕಿಗೆ ೫೦೦ ರೂ. ಅವರ ಸಂಪಾದನೆಯಂತೆಯೇ ಖರ್ಚೂ. ಒಂದು ಉಪನ್ಯಾಸದ ಹುಟ್ಟು ವಳಿ ಸುಮಾರು ೨೦೦ ಇಂದ ೨೦೦೦ ರೂ. ಗಳ ವರೆಗೆ. ಒಂದು ಉಪನ್ಯಾಸಕ್ಕೆ ನನ್ನ ಸಂಪಾದನೆ ೫೦೦ ರೂ. ತನಕ ಹೋಗಿದೆ. ನಿಜವಾಗಿಯೂ ನನ್ನ ಅದೃಷ್ಟ ಖುಲಾಯಿಸುತ್ತಿದೆ. ಇಲ್ಲಿಯವರಿಗೆ ನನಲ್ಲಿ ಅಭಿಲಾಷೆ. ನಾನು ಮಾತನಾಡುವುದನ್ನು ಕೇಳುವುದಕ್ಕಾಗಿ ಸಾವಿರ ಗಟ್ಟಲೆ ಗುಂಪು ಕೂಡುತ್ತದೆ.

ಈಶ್ವರೇಚ್ಛೆ. ಮಿಸ್ಟರ್.................ಅವರನ್ನು ಇಲ್ಲಿ ಕಂಡೆನು. ಮೊದಲು ಮೊದಲು ನನ್ನಲ್ಲಿ ಅವರಿಗೆ ಬಹಳ ಪ್ರೀತಿ. ಎಂದು ಷಿಕಾಗೋ ಜನರೆಲ್ಲರೂ ಹೆಂಗಸರೂ ಗಂಡಸರೂ ತಂಡ ತಂಡವಾಗಿ ನನ್ನ ಬಳಿ ಬರಲಾರಂಭಿಸಿದರೋ ಆಗ........ಅವರ ಹೊಟ್ಟೆಯಲ್ಲಿ ಹೊತ್ತಿ ಕೊಂಡಿತು ಉರಿ.. ಈ ಪಾತ್ರಿಗಳು ನನ್ನನ್ನು ಅಡಗಿಸುವುದಕ್ಕೆ ವಿಶ್ವಪ್ರಯತ್ನಪಟ್ಟರು. ಆದರೆ ಗುರು ನನ್ನ ಪಕ್ಷವಾಗಿರುವಾಗ ಯಾರೇನುತಾನೇ ಮಾಡಾರು! ಒಟ್ಟು ಅಮೆರಿಕ ಜನರೇ ನನ್ನಲ್ಲಿ ಪ್ರೀತಿಯಿಟ್ಟು ಮರ್‍ಯಾದೆ ಮಾಡುತ್ತಾರೆ; ನನ್ನ ಖರ್ಚನ್ನು ನಡೆಯಿಸುತ್ತಾರೆ; ನನ್ನನ್ನು ಗುರುಭಾವದಿಂದ ಕಾಣುತ್ತಾರೆ,........ನನಗೆ ವಿರೋಧವಾಗಿ ಏನು ಮಾಡುವುದಕ್ಕೂ ನಿಮ್ಮ ಪುರೋಹಿತರುಗಳ ಕೈಯಲ್ಲಾಗಲಿಲ್ಲ. ಇದಲ್ಲದೆ ಅವರೆಲ್ಲರೂ ಪಂಡಿತ ಜಾತಿಯವರು. 'ನಮ್ಮ ವಿಧವೆಯರಿಗೆ ನಾವು ಮದುವೆ ಮಾಡುತ್ತೇವೆ', 'ನಾವು ಮೂರ್ತಿಪೂಜೆ ಮಾಡುವುದಿಲ್ಲ' ಎಂದು ಮುಂತಾಗಿ ಇಲ್ಲಿ ಹೇಳಿದರೆ ಕಾರ್ಯ ಜರುಗದು. ಅವರಿಗೆ ಬೇಕಾದುದು ತತ್ವ ಪಾಂಡಿತ್ಯ. ಬರೀ ಮಾತು ಫಲಿಸದು.

ಡ...........ಅವನು ಒಳ್ಳೆಯ ಹುಡುಗ. ಅವನಿಗೆ ವಿದ್ಯೆ ಏನಿಲ್ಲ. ಆದರೆ ಅವನು ಬಹಳ ಸಾಧು. ಈ ದೇಶದಲ್ಲಿ ಜನರಿಗೆ ಅವನಲ್ಲಿ ಹೆಚ್ಚು ಮೋಹವಿದ್ದಿತು.

ಅಹಾ! ನನಗೆ ಬುದ್ಧಿ ಬಂದಿತು. "ಯೇ ನಿಘ್ನಂತಿ ಪರಹಿತಂ ನಿರರ್ಥಕಂ ತೇ ಕೇ ನ ಜಾನೀಮಹೆ" 'ಸುಮ್ಮಸುಮ್ಮನೆ ಇತರರ

ಕಲ್ಯಾಣಕ್ಕೆ ಅಡ್ಡಿಮಾಡುವರೆಂತಹವರೋ ನಾವರಿಯೆವು.' (ಭರ್ತೃಹರಿ). ಅಣ್ಣಾ! ಎಲ್ಲವನ್ನೂ ಬಿಟ್ಟು ಕಳೆಯ ಬಹುದು. ಆದರೆ ಈ ಹಾಳು ಹೊಟ್ಟೆಕಿಚ್ಚನ್ನು ಬಿಡಲಾಗದು....ಇದು ನಮ್ಮ ಜಾತಿದೋಷ–ಪರನಿಂದೆ, ಇತರರು ಬದುಕುವುದನ್ನು ನೋಡಿ ಕರುಬುವುದು, ನನ್ನದೇ ದೊಡ್ಡಸ್ತಿಕೆ, ಇತರರು ದೊಡ್ಡವರಾಗಕೂಡದು!

ಇಲ್ಲಿಯುವರಂತಹ ಸ್ತ್ರೀಯರು ಜಗತ್ತಿನಲ್ಲಿಯೇ ಇಲ್ಲ. ಅವರೆಷ್ಟು ಪವಿತ್ರರು! ಎಷ್ಟು ಆತ್ಮಾವಲಂಬಿಗಳು! ಎಷ್ಟು ದಯಾಪರರು! ಸಕಲವೂ ಸ್ತ್ರೀಯರದೇ ಈ ದೇಶದಲ್ಲಿ. ವಿದ್ಯಾ ಬುದ್ಧಿ ಎಲ್ಲವೂ ಇವರದೇ. "ಯಾ ಶ್ರೀಃ ಸ್ವಯಂ ಸುಕೃತೀನಾಂ ಭವನೇಷು" "ಪುಣ್ಯವಂತರ ಮನೆಗಳಲ್ಲಿ ಯಾವ ಲಕ್ಷ್ಮೀ ಸ್ವರೂಪಿಣಿಯಾಗಿರುವಳೋ" ಎಂಬುದು ಈ ದೇಶಕ್ಕೆ ಸಲ್ಲುತ್ತದೆ. "ಪಾಪಾತ್ಮನಾಂ ಹೃದಯೇಷು ಅಲಕ್ಷ್ಮೀಃ (ಪಾಪಾತ್ಮರ ಹೃದಯ ಗಳಲ್ಲಿ ಅಲಕ್ಷ್ಮೀ" ಎಂಬುದೇ ನಮ್ಮ ದೇಶಕ್ಕೆ ಸರಿ ಹೋಗುತ್ತದೆ. ಈ ಅಮೆರಿಕ ಸ್ತ್ರೀಯರನ್ನು ನೋಡಿ ನಾನು ಸ್ತಂಭಿತನಾಗಿದ್ದೇನೆ. "ತ್ವಂ ಶ್ರೀ ಸ್ತ್ವಮೀಶ್ವರೀ ತ್ವಂ ಹ್ರೀಃ" (ನೀನೇ ಲಕ್ಷ್ಮೀ, ನೀನೇ ಈಶ್ವರೀ, ನೀನೇ ಲಜ್ಜಾಸ್ವರೂಪಿಣೀ), "ಯಾ ದೇವೀ ಸರ್ವಭೂತೇಷು ಶಕ್ತಿ ರೂಪೇಣ ಸಂಸ್ಥಿತಾ" (ಯಾವ ದೇವಿಯು ಸರ್ವ ಭೂತದಲ್ಲಿಯೂ ಶಕ್ತಿಸ್ವರೂಪಳಾಗಿರುವಳೋ)—ಇವು ಇಲ್ಲಿಗೆ ಅನ್ವಯಿಸುತ್ತವೆ. ಈ ದೇಶದ ಹಿಮದಷ್ಟು ಬಿಳುಪೂ ಶುದ್ಧರೂ ಆದಂತಹ ಸಾವಿರಾರು ಮಂದಿ ಸ್ತ್ರೀಯರಿದ್ದಾರೆ ಇಲ್ಲಿ. ನಮ್ಮ ದೇಶದಲ್ಲಿ ಹತ್ತುವರುಷಕ್ಕೆ ಮಕ್ಕಳು ಹಡೆಯುವ ಹುಡಿಗಿಯರನ್ನು ನೋಡು. ಹೇ ಪ್ರಭೋ! ಈಗ ನನಗೆಲ್ಲವೂ ಗೊತ್ತಾಗುತ್ತದೆ. ಎನ್ನ ಒಡಹುಟ್ಟಿದವನೇ "ಯತ್ರ ನಾರ್ಯಸ್ತು ನಂದ್ಯಂತೆ ತತ್ರ ದೇವತಾಃ" (ಎಲ್ಲಿ ಸ್ತ್ರೀಯರು ಆನಂದದಿಂದಿರುವರೋ ಅಲ್ಲಿ ದೇವತೆಗಳಿಗೂ ಸಂತೋಷ) ಇದೀಗ ಮಹಾ ಮನುವಿನ ವಚನ. ಮಹಾ ಪಾಪಿಗಳು ನಾವು. ಸ್ತ್ರೀಯರು "ತುಚ್ಛವಾದ ಕೀಟಗಳು, ನರಕಕ್ಕೆ ಮಾರ್ಗಗಳು" ಎಂದು ಹೇಳಿ ಹೇಳಿ ಈ ಅಧೋಗತಿಯಲ್ಲಿದ್ದೇವೆ. 'ಅಪ್ಪ!' ಇದೇ ಸ್ವರ್ಗಕ್ಕೂ ನರಕಕ್ಕೂ ಭೇಧ. "ಯಾಥಾ ತಥ್ಯತೋ ಅರ್ಥಾನ್ ವಿದಧಾತಿ" (ಈಶಾವಾಸ್ಯೋಪನಿಷತ್ತು) (ಯೋಗ್ಯತೆಗೆ

ತಕ್ಕಂತೆ ಕರ್ಮ ಫಲವನ್ನು ವಿಧಿಸುತ್ತಾನೆ ಅವನು). ಬರೀ ಬಯಲು ಮಾತುಗಳಿಂದ ಪ್ರಭುವನ್ನು ಮೋಸ ಮಾಡುವುದಕ್ಕಾದೀತೇನು ? ಪ್ರಭು ಹೇಳಿದ್ದಾನೆ "ತ್ವಂ ಸ್ತ್ರೀ ತ್ವಂ ಪುಮಾನಸಿ, ತ್ವಂ ಕುಮಾರ ಉತ ವಾ ಕುಮಾರೀ" (ನೀನೇ ಸ್ತ್ರೀ, ನೀನೇ ಪುರುಷ, ನೀನೇ ಕುಮಾರ, ಕುಮಾರಿಯೂ ನೀನೇ–ಶ್ವೇತಾಶ್ವತರ ಉಪ). ನಾವು ಹೇಳುವುದೇನೆಂದರೆ "ದೂರಮಪಸರ ರೇ ಚಂಡಾಲ" (ದೂರ ಹೋಗು ಹೇ ಚಂಡಾಲ !) ; 'ಕೇನೈಷಾ ನಿರ್ಮಿತಾ ನಾರೀ ಮೋಹಿನೀ ' (ಈ ಮೋಹಿನೀ ಸ್ತ್ರೀಯನ್ನು ನಿರ್ಮಿಸಿದವರಾರು ?) ಎಂದು ಮುಂತಾಗಿ. ಎನ್ನ ಸಹೋದರನೇ ! ಅಯ್ಯೋ, ದಕ್ಷಿಣ ದೇಶದಲ್ಲಿ ಮೇಲು ಜಾತಿಯವರು ಕೀಳು ಜಾತಿಯವರ ಮೇಲೆ ನಡೆಯಿಸುವ ಅತ್ಯಾಚಾರವನ್ನು ನೋಡಿದ್ದೇನೆ ನಾನು. ದರಿದ್ರರ ದುಃಖವನ್ನು ನೀಗಿಸಬ ಮಾನವರನ್ನು ದೇವತೆಗಳನ್ನಾಗೆಸಗದ ಧರ್ಮ ಧರ್ಮವೇನು ? ನಮ್ಮದು ಧರ್ಮವೇನು ? ನಮ್ಮ ಧರ್ಮ "ಮುಟ್ಟಬೇಡ ಧರ್ಮ", ಬರೀ "ಮುಟ್ಟಬೇಡ" ಮುಟ್ಟ ಬೇಡ. ಎಲೈ ಹರಿ ! ಯಾವ ದೇಶದ ದೊಡ್ಡ ದೊಡ್ಡ ಮಸ್ತಿಷ್ಕರು ಕಳೆದ ಎರಡು ಸಾವಿರ ವರುಷಗಳಿಂದಲೂ ಬಲಗೈಲಿ ಊಟ ಮಾಡುವುದೋ ಅಲ್ಲವೇ ಎಡಗೈಯ್ಯಲ್ಲೋ, ನೀರನ್ನು ಬಲದ ಕಡೆಯಿಂದ ತೆಗೆದು ಕೊಳ್ಳುವುದೋ, ಎಡದ ಕಡೆಯಿಂದ ತೆಗೆದು ಕೊಳ್ಳುವುದೋ ಎಂಬ ನಿರರ್ಥಕವಾದ ವಿಚಾರವನ್ನು ಮಾಡಿರುವರೋ ಅಂತಹ ದೇಶವು ಅಧೋಗತಿಯನ್ನು ಹೊಂದದೆ ಇನ್ನಾವುದನ್ನು ತಾನೇ ಪಡೆದೀತು ? "ಕಾಲಃ ಸುಪ್ತೇಷು ಜಾಗರ್ತಿ ಕಾಲೋ ಹಿ ದುರತಿಕ್ರಮಃ" (ಸಕಲರೂ ನಿದ್ದೆಗೈಯ್ಯುವಾಗ ಕಾಲ ಮಾತ್ರ ಎಚ್ಚರವಾಗಿರುತ್ತದೆ. ಕಾಲವನ್ನತಿಕ್ರಮಿಸುವುದತಿಕಠಿನ.) ಇದು ಪ್ರಭುವಿಗೆ ಗೊತ್ತು. ಆತನ ಕಣ್ಣಿಗೆ ಮಣ್ಣು ಹಾಕುವವನಾರು ?

ಯಾವ ದೇಶದಲ್ಲಾದರೆ ಬಲು ಮಂದಿ ಮಹುವಾ ಹೂವನ್ನು ತಿಂದು ಜೀವಿಸುವರೋ, ಸುಮಾರು ಹತ್ತಿಪ್ಪತ್ತು ಲಕ್ಷ ಸಾಧು ಸಂತರೂ ಬ್ರಾಹ್ಮಣರೂ ಈ ಬಡವರ ರಕ್ತವನ್ನು ಹೀರುತ ಅವರ ಮೇಲ್ಮೆಗಾಗಿ ಕೊಂಚವೂ ಪ್ರಯತ್ನಿಸದೆ ಇರುವರೋ ಆ ದೇಶ ದೇಶವೋ ನರಕವೋ ! ಅದೇನು ಧರ್ಮವೋ, ದೆವ್ವದ ಕುಣಿತವೋ, ಎನ್ನೊಡಹು

ಟ್ಟಿದವನೇ! ಇದನ್ನು ಬುಡಮುಟ್ಟ ತಿಳಿ. ನಾನು ಭಾರತವರ್ಷವನ್ನೆಲ್ಲ ಸುತ್ತಿದ್ದೇನೆ. ಈ ದೇಶವನ್ನೂ ನೋಡಿದ್ದೇನೆ. ಕಾರಣವಿಲ್ಲದೆ ಕಾರ್ಯವಾಗದು, ಪಾಪವಿಲ್ಲದೆ ಶಿಕ್ಷೆಯುಂಟೆ?

"ಸರ್ವಶಾಸ್ತ್ರ ಪುರಾಣೇಷು ವ್ಯಾಸಸ್ಯ ವಚನಂ ಧ್ರುವಂ ।
ಪರೋಪಕಾರಸ್ತು ಪುಣ್ಯಾಯ ಪಾಪಾಯ ಪರಪೀಡನಂ ॥"

ಸರ್ವಶಾಸ್ತ್ರ ಪುರಾಣಗಳಲ್ಲಿಯೂ ವ್ಯಾಸರ ವಚನವು ನಿಶ್ಚಯವು. ಪರೋಪಕಾರದಿಂದ ಪುಣ್ಯವೂ ಪರಪೀಡನದಿಂದ ಪಾಪವೂ ಪ್ರಾಪ್ತವಾಗುತ್ತವೆ.

ಎನ್ನೊಡಹುಟ್ಟಿದವನೇ! ಇವನ್ನೆಲ್ಲಾ ನೋಡಿ ಮುಖ್ಯವಾಗಿ ಈ ಮೌಢ್ಯವನ್ನೂ ಬಡತನವನ್ನೂ ನೋಡಿ ನನಗೆ ನಿದ್ರೆ ಬರಲಿಲ್ಲ. ಕನ್ಯಾಕುಮಾರಿಯ ಗುಡಿಯಲ್ಲಿ ಭಾರತ ವರ್ಷದ ಕೊನೆಯ ಕಲ್ಲುಬಂಡೆಯ ಮೇಲೆ ಕುಳಿತಿದ್ದ ಹಾಗೆ ನನಗೊಂದು ಆಲೋಚನೆ ಹೊಳೆಯಿತು ನಾವೆಷ್ಟುಮಂದಿ ಸನ್ಯಾಸಿಗಳಿದ್ದುಕೊಂಡು ಜನರಿಗೆ ದರ್ಶನವನ್ನು ಉಪದೇಶಿಸುತ ಸುತ್ತುತ್ತಿರುವೆವಷ್ಟೆ! ಇದೆಲ್ಲಾ ಹುಚ್ಚುತನ. ನಮ್ಮ ಗುರುದೇವನು ಹೇಳಲಿಲ್ಲವೆ "ಬರೀ ಹೊಟ್ಟೆಯಲ್ಲಿ ಧರ್ಮ ಹಿಡಿಯದು" ಎಂದು. ಬಡವರು ಪಶುಗಳಂತೆ ಜೀವಯಾತ್ರೆಯನ್ನು ನಡೆಯಿಸಿಕೊಂಡಿರುವುದಕ್ಕೆ ಅಜ್ಞಾನವೇ ಕಾರಣ. ನಾವು ನಾಲ್ಕು ಯುಗಗಳಲ್ಲಿಯೂ ಅವರ ರಕ್ತವನ್ನು ಹೀರುತ ಅವರನ್ನು ಕಾಲಿನಲ್ಲಿ ಮೆಟ್ಟುತ್ತಲಿದ್ದೇವೆ.

ಪರಹಿತವನ್ನು ಬಯಸುವ ಸ್ವಾರ್ಥಶೂನ್ಯರಾದ ಸನ್ಯಾಸಿಗಳು ಕೆಲವರು ಗ್ರಾಮ ಸಂಚಾರ ಹೊರಟು, ವಿದ್ಯಾ ಪ್ರಚಾರ ಮಾಡುತ, ಭೂಪಟಗಳು, ಕಾಮೆರಾ, ಗೋಳಗಳು ಇವೇ ಮುಂತಾದ ಉಪಾಯಗಳ ದ್ವಾರಾ ಉತ್ತಮರು ಮೊದಲುಗೊಂಡು ಚಂಡಾಲರ ಪರ್ಯಂತ ತಿಳುವಳಿಕೆಯನ್ನು ಹರಡುತ ಸಕಲರ ಮೇಲ್ಮೆಗಾಗಿ ಪ್ರಯತ್ನಪಟ್ಟಲ್ಲಿ, ಅದರಿಂದ ಕಾಲಾನುಕಾಲಕ್ಕೆ ಕಲ್ಯಾಣವುಂಟಾಗದೇನು? ನನ್ನ ಮನಸ್ಸಿನಲ್ಲಿರುವ ಪ್ಲಾನುಗಳನ್ನೆಲ್ಲ (ಅಭಿಪ್ರಾಯಗಳನ್ನೆಲ್ಲ) ಈ ಸಣ್ಣ ಪತ್ರದಲ್ಲಿ ಅಡಗಿಸಲಾರೆನು. ಒಟ್ಟೀನೆಂದರೆ—ಮುಹಮ್ಮದನ ಬಳಿ ಬೆಟ್ಟ ಬಾರದಿದ್ದರೆ ಬೆಟ್ಟದ ಬಳಿ ಮುಹಮ್ಮದನೇ ಹೋಗಬೇಕು ಎಂದರೆ ಬಡವರ ಮಕ್ಕಳು ಓದು

ಬರಹ ಕಲಿತುಕೊಳ್ಳಲು ಪಾಠಶಾಲೆಗೆ ಹೋಗುವುದಕ್ಕಾಗದ ಪಕ್ಷದಲ್ಲಿ ಬಡವರ ಮನೆಗೇ ಹೋಗಿ ಅವರಿಗೆ ಶಿಕ್ಷೆಯನ್ನು ಕೊಡಬೇಕು. ಅವರ ಬಡತನವನ್ನು ಎಷ್ಟೆಂದು ಹೇಳೋಣ! ಪಾಠಶಾಲೆಗೆ ಹೋಗುವುದಕ್ಕೆ ಕೂಡ ಅವರಿಂದಾಗದು! ಇವಲ್ಲದೆ ಬಡವರಿಗೆ ಕಾವ್ಯ ಗೀವ್ಯ ಹೇಳಿಕೊಡುವುದರಿಂದ ಪ್ರಯೋಜನವಿಲ್ಲ. ನಮ್ಮ ಜಾತಿವ್ಯಕ್ತಿತ್ವವು ಎಂದರೆ ನಮ್ಮ ನಿಜವಾದ ವಿಶೇಷತ್ವವು ನಷ್ಟವಾಗಿದೆ. ಅದರಿಂದಲೇ ಇಷ್ಟು ದುಃಖ ಇಷ್ಟುಕಷ್ಟ ಭಾರತದಲ್ಲಿ. ನಷ್ಟವಾಗಿರುವ ಜಾತಿ ವಿಶೇಷತ್ವವನ್ನು ಮರಳಿ ವಿಕಾಸಗೊಳಿಸಿ ಕೀಳು ಜಾತಿಯವರನ್ನು ಉದ್ಧಾರಮಾಡಬೇಕು. ಹಿಂದೂ, ಮುಸಲ್ಮಾನ್, ಕಿರಸ್ತಾನ್ ಎಲ್ಲರೂ ಅವರನ್ನು ಕಾಲಿನಲ್ಲಿ ಮೆಟ್ಟಿರುವರು. ಇನ್ನು ಇವರನ್ನು ಉದ್ಧಾರಮಾಡುವ ಶಕ್ತಿಯಾವುದುಂಟೋ ಅದು ನಮ್ಮೊಳಗಿನಿಂದಲೇ ಉದ್ಭವವಾಗಬೇಕು. ಆಚಾರಶೀಲರಾದ ಹಿಂದೂಗಳಿಂದಲೇ ಬರಬೇಕು. ಎಲ್ಲ ದೇಶಗಳಲ್ಲಿಯೂ ಕಂಡುಬರುವ ದೋಷಗಳು ಆಯಾ ದೇಶ ಧರ್ಮದ ದೋಷವಲ್ಲ. ಧರ್ಮಪಾಲನವು ಸರಿಯಾಗಿ ನಡೆಯದಿರುವುದೇ ಕಾರಣ. ಆದುದರಿಂದ ಧರ್ಮದ ದೋಷವಾವುದೂ ಇಲ್ಲ—ಎಲ್ಲವೂ ಮನುಷ್ಯರದೇ!

ಈ ಪ್ರಕಾರ ಮಾಡುವುದಕ್ಕೆ ಮೊದಲು ಬೇಕಾದುದು ಜನ; ಎರಡನೆಯದು ಹಣ. ಗುರುಕೃಪೆಯಿಂದ ಪ್ರತಿಯೊಂದು ಷಹರಿನಲ್ಲಿಯೂ ಹತ್ತು ಹದಿನೆಂಟು ಮಂದಿ ಸಿಕ್ಕುವರೆಂದು ನಾನು ದೃಢವಾಗಿದ್ದೆನು. ಧನವನ್ನು ಶೇಖರಿಸುವುದಕ್ಕಾಗಿ ಸಂಚಾರ ಹೊರಟೆನು. ಭಾರತೀಯರು ದುಡ್ಡು ಕೊಡುತ್ತಿದ್ದರೆಂದು ತಿಳಿದುಕೊಂಡಿದ್ದೀಯೇನು?........ಸ್ವಾರ್ಥಪರತೆಯ ಮೂರ್ತಿಗಳು! ಅವರೇ ಕಾಸು ಕೊಡುವವರು! ಆದುದರಿಂದಲೇ ನಾನು ಅಮೆರಿಕಕ್ಕೆ ಬಂದುದು. ಇಲ್ಲಿ ನಾನೇ ಕಾರ್ಯಮಾಡಿ ಹಣ ಸಂಪಾದಿಸಿ ಕಡೆಗೆ ನನ್ನ ದೇಶಕ್ಕೆ ಹಿಂದಿರುಗಿ, ನನ್ನ ಜೀವನದ ಮುಖ್ಯೋದ್ದೇಶಸಿದ್ಧಿಗಾಗಿ ವಿನಿಯೋಗಿಸುವೆನು.

ನಮ್ಮ ದೇಶದಲ್ಲಿ social virtue (ಯಾವ ಗುಣಗಳಿಂದ ಸಮಗ್ರ ಸಮಾಜವು ಉಪಕೃತವಾಗುವುದೋ ಅವು) ಎಷ್ಟು ಅಭಾವವೋ ಈ ದೇಶದಲ್ಲಿ Spirituality (ಆತ್ಮವಿದ್ಯೆ) ಅಷ್ಟು ಅಭಾವವು. ನಾನು

ಅವರಿಗೆ spirituality ಯನ್ನು ಕೊಡುತ್ತೇನೆ, ಅವರು ನನಗೆ ದುಡ್ಡು ಕೊಡುತ್ತಾರೆ. ನಾನು ಸಿದ್ಧಕಾಮನಾಗಲೆಷ್ಟು ಕಾಲ ಹಿಡಿಯುವುದೋ ನಾನರಿಯೆ.... ..............ಇಲ್ಲಿನವರು ಕಪಟಿಗಳಲ್ಲ. ಇವರಲ್ಲಿ ಹೊಟ್ಟೆ ಕಿಚ್ಚಂತೂ ಇಲ್ಲವೇ ಇಲ್ಲ. ಹಿಂದುಸ್ಥಾನದಲ್ಲಿ ನಾನು ಯಾರನ್ನೂ ನೆಚ್ಚೆನು. ನನಗೆ ಬೇಕಾದುದನ್ನು ಗಳಿಸುವುದಕ್ಕಾಗಿ ನಾನೇ ನನ್ನ ಕೈಲಾದಷ್ಟು ಶ್ರಮಪಟ್ಟು ನನ್ನ ಉದ್ದೇಶವನ್ನು ಈಡೇರಿಸಿಕೊಳ್ಳುತ್ತೇನೆ; ಅಲ್ಲವೆ in the attempt (ಪ್ರಯತ್ನಮಾಡಿ) ಪ್ರಾಣಬಿಡುತ್ತೇನೆ. "ಸನ್ನಿಮಿತ್ತೆ ವರಂ ತ್ಯಾಗೋ ವಿನಾಶೆ ನಿಯತೆ ಸತಿ" (ಸಾವು ನಿಶ್ಚಯವಾಗಿರುವಾಗ ಸದುದ್ದೇಶ ಸಾಧನೆಗಾಗಿ ದೇಹತ್ಯಾಗ ಮಾಡುವುದು ಮೇಲು). ನೀನೊಂದು ವೇಳೆ ತಿಳಿದುಕೊಳ್ಳಬಹುದು ಇದೆಲ್ಲಾ ಏನು, Utopian nonsense (ಆಗದ ಹೋಗದ ಮಾತು) ಎಂದು. ಆದರೆ ನನ್ನ ಒಳಗಿರುವುದನ್ನು ನೀನರಿಯೆ. ನಿಮ್ಮಲ್ಲಿ ಯಾರಾದರೂ ನನಗೆ ಸಹಾಯಮಾಡಿದರೆ ಸರಿ, ಅಲ್ಲದಿದ್ದರೆ ಗುರುದೇವನು will show me the way out (ನನಗೆ ದಾರಿತೋರಿಸುವನು). jealousy (ಹೊಟ್ಟೆಕಿಚ್ಚು) ಯನ್ನು ಬಿಟ್ಟುಕಳೆಯಲು ನಮ್ಮಿಂದಾಗದು. ಇದು ನಮ್ಮ ಜಾತಿದೋಷ (National sin). ಈ ದೇಶದಲ್ಲಿ ಅದಿಲ್ಲ. ಆದುದರಿಂದಲೇ ಅವರಷ್ಟು ಮಹತ್ವದವರು.

ನಮ್ಮಂತಹ ಕೂಪ ಮಂಡೂಕಗಳನ್ನು ನಾನೆಲ್ಲಿಯೂ ನೋಡಿಲ್ಲ. ಹೊಸದಾದುದು ಯಾವ ದೇಶದಿಂದ ಬೇಕಾದರೂ ಬರಲಿ ಅದನ್ನು ಅಮೆರಿಕವು ಮೊದಲು ಅಂಗೀಕರಿಸುವುದು. ಆದರೆ ನಾವೋ, ನಮ್ಮಹಾಗೆ ಪ್ರಪಂಚದಲ್ಲಿ ಯಾರೂ ಇಲ್ಲ. ಆರ್ಯವಂಶದವರಲ್ಲವೆ ನಾವು! ಆ ಹುಟ್ಟು ಗುಣವೆಲ್ಲಿರುವುದೋ (heredity) ನಾಕಾಣೆ.......ಆದರೂ ಆರ್ಯ ವಂಶೀಯರು.

ಸತತವೂ ನಿನ್ನ
ವಿವೇಕಾನಂದ.

ಯುಕ್ತರಾಜ್ಯ ಅಮೇರಿಕ,
೨೬ನೆಯ ಡಿಸೆಂಬರು ೧೮೯೪.

ಪ್ರಿಯ..............

ನಿನಗೆ ಶುಭಾಶೀರ್ವಾದಗಳು. ನಿನ್ನ ಪತ್ರವು ಈಗತಾನೇ ಕೈಸೇರಿತು. ನರಸಿಂಹನು ಭಾರತ ವರ್ಷಕ್ಕೆ ಹಿಂದಿರುಗಿ ಬಂದ ಸಮಾಚಾರವನ್ನು ಕೇಳಿ ಸಂತೋಷವಾಯಿತು. ಧರ್ಮ ಮಹಾಸಭೆಯ ಕಾರ್ಯವನ್ನು ವಿವರಿಸುವ ಡಾ. ಬ್ಯಾರೋಜ ಅವರ ಪುಸ್ತಕವನ್ನು ನಿನಗೆ ಕಳುಹಿಸುವುದಕ್ಕಾಗದೆ ಇರುವುದನ್ನು ನಿನಗೆ ತಿಳಿಸಲು ನನಗೆ ವ್ಯಸನ. ಕಳುಹಿಸುವ ಪ್ರಯತ್ನವನ್ನು ಮಾಡುತ್ತೇನೆ. ಧರ್ಮ ಮಹಾಸಭೆಯ ವಿಷಯವಾದ ವ್ಯಾಪಾರಗಳೆಲ್ಲವೂ ಈ ದೇಶದಲ್ಲಿ ಪುರಾಣವಾಗಿ ಬಿಟ್ಟಿರುವುದೆಂದು ಇಲ್ಲಿ ವದಂತಿ. ಡಾ. ಬ್ಯಾರೋಜರವರು ಈಗ ಯಾವದಾದರೂ ಪುಸ್ತಕವನ್ನು ಬರೆದಿರುತ್ತಾರೋ ಇಲ್ಲವೋ ನಾನರಿಯೆ. ಅಲ್ಲದೆ ನೀನು ಯಾವ ಪತ್ರಿಕೆಗಳ ವಿಷಯವನ್ನು ಬರೆದಿರುವೆಯೋ ಅವರ ಸಂಬಂಧವಾಗಿ ಏನೂ ನನಗೇನೂ ತಿಳಿಯದು. ಈಗ ಡಾ. ಬ್ಯಾರೋಜರ, ಧರ್ಮ ಮಹಾಸಭೆ, ಈ ವಿಷಯವಾಗಿ ಇನ್ನು ಬೇರೆಯಾವುದಂಟೋ ಅವೆಲ್ಲ ಪುರಾಣವಾಗಿ ಬಿಟ್ಟಿದೆ. ಅದುದರಿಂದ ನೀವು ಇವನ್ನೆಲ್ಲಾ ಇತಿಹಾಸದೊಳಗೆ ಅಡಗಿ ಹೋದುವುಗಳೆಂದು ಎಣಿಸಬೇಕು.

ಪಾದ್ರಿಗಳ ವರ್ತಮಾನ ಪತ್ರಿಕೆಗಳು ಆಗಿಂದಾಗ್ಯೆ ನನ್ನಮೇಲೆ ದೋಷಾರೋಪಣೆ ಮಾಡುತ್ತವೆಂಬುದು ನನ್ನ ಕಿವಿ ಮುಟ್ಟಿರುವುದು. ಆದರೆ ನಾನು ಅವನ್ನು ನೋಡುವುದೇ ಇಲ್ಲ. ನನಗೆ ಅಷ್ಟು ಅಲಕ್ಷ್ಯ. ಇಂಡಿಯ ದೇಶದಲ್ಲಿ ನನ್ನನ್ನು ದೂಷಣೆ ಮಾಡಿರುವ ಪತ್ರಿಕೆಗಳನ್ನು ನೀನು ನನಗೆ ಕಳುಹಿಸಿದುದೇ ಆದರೆ, ನಾನು ಅವನ್ನು ಕಳವು ಕಾಗದದ ಕುಕ್ಕೆಯಲ್ಲಿ ಬಿಸಾಡಬೇಕಾಗುತ್ತದೆ. ಇಲ್ಲಿ ನಮ್ಮ ಕಾರ್ಯಕ್ಕಾಗಿ ಕೊಂಚ ಚಳವಳಿ ಬೇಕಾಗಿದ್ದಿತು. ಈಗ ಸಾಕಾದಷ್ಟು ಆಗಿದೆ. ನನ್ನ ವಿಷಯವಾಗಿ ಜನಗಳೇನು ಹೇಳುತ್ತಾರೆಯೋ ಅದಕ್ಕೆ ಗಮನ ಕೊಡಬೇಡ ಅದು ಒಳ್ಳೆಯದಾಗಲಿ, ಕೆಟ್ಟದಾಗಲಿ. ನಿನ್ನ ಕಾರ್ಯವನ್ನು ನೀನು ನೋಡು,

'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ' (ಗೀತಾ) (ಒಳ್ಳೆಯುದನ್ನು ಮಾಡುವವನಿಗೆ ಕೆಡಕೆಂದೂ ಉಂಟಾಗದು) ಇದನ್ನು ಜ್ಞಾಪಕದಲ್ಲಿಡು.

ಇಲ್ಲಿ ಜನರು ಪ್ರತಿ ದಿನವೂ ನನ್ನ ವಿಷಯದಲ್ಲಿ ತಮ್ಮ ಮೆಚ್ಚಿಕೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಬೇರೆಯಾಗಿ ನಿನಗೆ ಹೇಳುತ್ತೇನೆ ಕೇಳು. ನೀನೆಷ್ಟು ತಿಳಿದುಕೊಂಡಿದ್ದಿಯೋ ಅದಕ್ಕಿಂತ ಬಲು ಹೆಚ್ಚು ನನ್ನ ಖ್ಯಾತಿ ಇಲ್ಲಿ. ಮೆಲ್ಲನೆ ನಡೆಯಬೇಕು ಸಕಲವೂ.

ಬ್ಯಾಲ್ಟಿಮೂರಿನಲ್ಲಿ ನಡೆದ ಸಂಗತಿಯ ವಿಷಯವಾಗಿ ಹೇಳತಕ್ಕುದಿದು. ಯುಕ್ತ ರಾಜ್ಯದ ದಕ್ಷಿಣಭಾಗದಲ್ಲಿ ಜನರಿಗೆ ನೀಗ್ರೊ ಸಂಕರ ಜಾತಿಯವರಿಗೂ ಇತರ ಕಪ್ಪುಜಾತಿಯವರಿಗೂ ಭೇದ ತಿಳಿಯದು. ಎಂದು ಅವರಿಗೆ ಗೊತ್ತಾಗುತ್ತದೋ ಆಗ ಅವರು ಬಹಳ ಅತಿಥಿ ಸತ್ಕಾರಪರರಾಗುತ್ತಾರೆ ................ ................ ................ ................

........ ...ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟವಾಗುವ ನಿಂದಾಸ್ತುತಿಗಳಿಗೆ ನಾನು ಲಕ್ಷ್ಯ ಕೊಡುವುದಿಲ್ಲವೆಂದು ನಾನು ಹಿಂದೆಯೇ ಬರೆದಿದ್ದೇನೆ. ಈಗಲೂ ಮರಳಿ ಬರೆಯುತ್ತೇನೆ. ಅವನ್ನು ಅಗ್ನಿಯಲ್ಲಿ ಹೋಮ ಮಾಡುತ್ತೇನೆ. ಹೀಗೆಯೇ ಮಾಡು ನೀನೂ. ವರ್ತಮಾನ ಪತ್ರಿಕೆಗಳ ಮುಟ್ಟಾಳುತನಕ್ಕೂ ನಿಂದೆಗೂ ಲಕ್ಷ್ಯಕೊಡಬೇಡ. ನಿನ್ನ ಕಾರ್ಯವನ್ನು ನೀನು ಮಾಡು ಮನಃಪೂರ್ವಕವಾಗಿ. ಸರಿಬರುವುದು ಸಕಲವೂ ಸತ್ಯಕ್ಕೆ ಜಯವಾಗಲೇ ಬೇಕು. ಸಾಕು; ನನಗೆ ವೃತ್ತಾಂತ ಪತ್ರಿಕೆಗಳನ್ನಾಗಲಿ, ಸಾಮಯಿಕ ಪತ್ರಿಕೆಗಳನ್ನಾಗಲಿ ಇನ್ನಾವ ಪುಸ್ತಕಗಳನ್ನಾಗಲಿ ಕಳುಹಿಸಬೇಡ. ನಾನು ಸದಾ ಸುತ್ತುತ್ತಿದ್ದೇನೆ. ಆದ ದರಿಂದ ಇವನ್ನೆಲ್ಲಾ ಹೊತ್ತುಕೊಂಡು ಹೋಗುವುದೆಂದರೆ ನನಗೆಷ್ಟು ಕಷ್ಟವೆಂಬುದು ನಿನಗೆ ಗೊತ್ತು.

ಮಿಷನರಿಗಳನ್ನು ನೀನು ಲಕ್ಷ್ಯಮಾಡಬೇಡ. ಇಲ್ಲಿ ಯಾರೂ ಅವರನ್ನು ಲಕ್ಷ್ಯಮಾಡುವುದಿಲ್ಲ............ಡಾಕ್ಟರು ಬ್ಯಾರೋಜ ಅವರು ಕೂಡ ಇಲ್ಲೊಬ್ಬ ದೊಡ್ಡಮನುಷ್ಯರಲ್ಲ. ಅವರ ವಿಷಯದಲ್ಲಿ ನಾನು ಮೌನವನ್ನು ತಾಳಿದ್ದೇನೆ, ನೀನೂ ಹಾಗೆಯೇ ಮಾಡಬೇಕೆಂಬುದು

ನನ್ನ ಇಚ್ಛೆ. ಎಲ್ಲಕ್ಕೂ ಮೇಲಾಗಿ, ನೀನು ನನಗೆ ಭಾರತ ವರ್ಷದ ವರ್ತಮಾನ ಪತ್ರಿಕೆಗಳ ಕಟ್ಟುಗಳನ್ನು ಕಳುಹಿಸಬೇಡ. ಅವುಗಳಿಂದ ಏನು ಪ್ರಯೋಜನವಾಗಬೇಕಾಗಿದ್ದಿತೋ ಅದಾಯಿತು. ಇನ್ನು ಸಾಕು. ಕಾರ್ಯದಲ್ಲಿ ಮನಸ್ಸಿಡು.

ಮ|| ರಾ|| ಸ. ಅಯ್ಯರವರನ್ನು ನಿಮ್ಮ ಸಂಘದ ಅಧ್ಯಕ್ಷರನ್ನಾಗಿ ಮಾಡಿರಿ. ಅವರಂತಹ ಅಕಪಟಿಯನ್ನೂ ಮಾನಾರ್ಹರನ್ನೂ ನಾನು ನೋಡಿಲ್ಲ. ಅವರಲ್ಲಿ ಬುದ್ಧಿಶಕ್ತಿಯೂ, ಚಿತ್ತ ವೃತ್ತಿಯೂ (ಭಾವ) ಬಹಳ ಸೊಗಸಾಗಿ ಕಲೆತಿರುವುವು. ಅವರನ್ನು ಸಭಾ ಪತಿಯನ್ನಾಗಿ ಮಾಡಿದರೆ ಕಾರ್ಯವು ಮುಂದೆ ಮುಂದೆ ಹೋಗುವುದು. ನನ್ನ ಕಡೆ ನಿನ್ನ ಮನಸ್ಸನ್ನು ಹೆಚ್ಚಾಗಿ ಹೋಗಗೊಡಿಸದೆ ನಿನ್ನ ಕಾರ್ಯವನ್ನು ಮುಂದರಿಸು. ನಿನ್ನ ಪಾಡಿಗೆ ಕಾರ್ಯಮಾಡು. ಮದ್ರಾಸಿನಿಂದಲೇ ಶಕ್ತಿ ತರಂಗವೇಳುವುದೆಂಬುದು ನನ್ನ ಮನಃ ಪೂರ್ವಕವಾದ ನಂಬಿಕೆ. ನಾನೆಂದು ಹಿಂದಿರುಗಿ ಬರುವೆನೋ ನಾನರಿಯೆ. ನಾನು ಇಲ್ಲಿಯೂ ಅಲ್ಲಿಯೂ ಎರಡುಕಡೆಯೂ ಕಾರ್ಯಮಾಡುತ್ತೇನೆ. ಆಗಾಗ್ಯೆ ಕೊಂಚ ಕೊಂಚ ಹಣ ಕಳುಹಿಸಿ ಸಹಾಯ ಮಾಡುತೇನೆ.

ನಿಮ್ಮೆಲ್ಲರಿಗೂ ನನ್ನ ಪ್ರೇಮವನ್ನು ತಿಳಿಸುತ್ತೇನೆ

ಸದಾ ಆಶೀರ್ವಾದಕ.

ವಿವೇಕಾನಂದ.

---

ಅಮೆರಿಕ, ೧೮೯೪

ಪ್ರಿಯ ಧರ್ಮಪಾಲ,

ನಿನ್ನ ಕಲ್ಕತ್ತೆಯ ವಿಳಾಸವನ್ನು ಮರೆತಿರುವೆನಾದಕಾರಣ ಈ ಪತ್ರವನ್ನು ಮಠದ ವಿಳಾಸಕ್ಕೆ ಕಳುಹಿಸಿರುವೆನು. ನಿನ್ನ ಕಲ್ಕತ್ತೆಯ ಉಪನ್ಯಾಸ ವಿಷಯವನ್ನೂ ಹಾಗೆಯೇ ಅದರಿಂದ ಯಾವ ಬಗೆಯ ಆಶ್ಚರ್ಯ

ವಾದ ಫಲಪ್ರಾಪ್ತಿಯಾಯಿತೆಂಬ ಸಕಲ ಸಮಾಚಾರಗಳನ್ನೂ ಕೇಳಿದ್ದೇನೆ ನಾನು........ ......

ಅದೃಷ್ಟವಶಾತ್ ಕಾಲಕ್ಕೆ ಸರಿಯಾಗಿ ಇಲ್ಲಿಯ ಮಿಷನರಿಯೋರ್ವನು ನನ್ನನ್ನು 'ಭಾಯಿ' (ಒಡಹುಟ್ಟಿದವನೆಂದು) ಸಂಬೋಧಿಸಿ ನನಗೆ ಒಂದು ಪತ್ರವನ್ನು ಬರೆದು, ತರುವಾಯ ಅದಕ್ಕೆ ನನ್ನ ಸಂಕ್ಷೇಪವಾದ ಉತ್ತರವನ್ನು ಅವಸರದಲ್ಲಿ ಮುದ್ರಿಸಿ, ಒಂದು ಬಗೆಯ ಗುಲ್ಲನ್ನೆಬ್ಬಿಸಿ ದ್ದಾನೆ. ಹೀಗಿರಲು ಇಲ್ಲಿಯವರು ಇಂತಹ ದೊಡ್ಡ ಮನುಷ್ಯನನ್ನು ಯಾವ ಬಗೆ ಭಾವಿಸುವರೋ ಅದನ್ನು ನೀನು ತಿಳಿದುಕೊಳ್ಳುವುದು ಆವ ಶ್ಯಕ. ಮರಳಿ ಅದೇ ಮಿಷನೆರಿಯು ನನ್ನ ಸ್ನೇಹಿತನೊಬ್ಬನ ಬಳಿ ಗುಟ್ಟಾಗಿ ಹೋಗಿ, ಆತನು ನನಗೆ ಯಾವ ಸಹಾಯವನ್ನೂ ಮಾಡಕೂಡದಂತಹ ಚೇಷ್ಟೆಯನ್ನು ಮಾಡಿದ್ದಾನೆ. ಇದರಿಂದ ಆತನಿಗೆ ಶುದ್ಧ ದ್ವೇಷಿಯಾಗಿ ದ್ದಾನೆ. ನಾನು ಈ ಮನುಷ್ಯನ ಕಾರ್ಯವನ್ನು ನೋಡಿ ಮೂಕನಾಗಿ ಬಿಟ್ಟಿದ್ದೇನೆ. ಇವನೊಬ್ಬ ಧರ್ಮಪ್ರಚಾರಕ! ಆತನದೆಲ್ಲವೂ ಇಂತಹ ಕಪಟ ವ್ಯಾಪಾರ! ಶೋಚನೀಯ ವಿಷಯವಿದು. ಎಲ್ಲ ದೇಶಗಳಲ್ಲಿಯೂ ಎಲ್ಲ ಧರ್ಮಗಳಲ್ಲಿಯೂ ಇಂತಹ ಭಾವ ಸರಿಯಾದುದಲ್ಲ.

ಕಳೆದ ಚಳಿಗಾಲದಲ್ಲಿ ಹೆಚ್ಚಾಗಿ ಈ ದೇಶಸಂಚಾರ ಮಾಡಿದೆನು. ಶೈತ್ಯ ಅತ್ಯಧಿಕವಾಗಿದ್ದರೂ ಅಷ್ಟೇನು ತೋರಲಿಲ್ಲ. 'ಸ್ವಾಧೀನ ಧರ್ಮ ಸಭೆ' (Free Religious Society) ಯ ಸಭಾಪತಿಗಳಾದ ಕರ್ನಲ್ ನೆವಿನ್‌ಸನ್ ಅವರಿಗೆ ನಿನ್ನ ಜ್ಞಾಪಕವು ನಿಜವಾಗಿಯೂ ಇದೆ. ಅವರು ಬಹಳ ಪ್ರಯತ್ನ ಮಾಡಿ ನಿನ್ನ ತತ್ತ್ವಾವಧಾನ ಸಕಲವನ್ನೂ ಗ್ರಹಿ ಸಿಬಿಟ್ಟಿದ್ದಾರೆ. ಆಕ್ಸ್‌ಫರ್ಡಿನ (ಇಂಗ್ಲೆಂಡ್) ಡಾಕ್ಟರು ಕಾರ್ಪೆಂಟರವರ ಪರಿಚಯವಾಯಿತು ಆ ದಿವಸ. ಅವರು ಪ್ಲಾಯಿಮತ್ತಿನಲ್ಲಿ ಬೌದ್ಧ ಧರ್ಮದ ನೀತಿ ತತ್ತ್ವ ಸಂಬಂಧವಾದ ಉಪನ್ಯಾಸವನ್ನು ಮಾಡಿದರು. ಅದು ಬೌದ್ಧಧರ್ಮ ವಿಷಯದಲ್ಲಿ ಅತಿಶಯ ಸಹಾನುಭೂತಿ ಪಾಂಡಿತ್ಯ ಪೂರಿತವಾದುದು. ಅವರು ನಿನ್ನ ಮತ್ತು ನಿನ್ನ ಲೇಖನದ ವಿಷಯವಾಗಿ ವಿಚಾರ ನಡೆಯಿಸುತ್ತಿದ್ದಾರೆ. ನಿನ್ನ ಮಹೋದ್ದೇಶವು ಕೈಗೂಡಲಿ ಎಂ ಬುದು ನನ್ನ ಬಯಕೆ. ಆತನು (ಬುದ್ಧದೇವನು) "ಬಹುಜನ ಹಿತಾಯ,

ಬಹುಜನ ಸುಖಾಯ" ಅವತರಿಸಿರುವರು. ಅಂತಹವನ ಯೋಗ್ಯದಾಸನು ನೀನು.

ನಿನಗೆಂದು ಅವಕಾಶ ದೊರಕುವುದೋ ಅಂದು ದಯೆಯಿಟ್ಟು ನನಗೆ ಸಂಬಂಧಪಟ್ಟ ಸಮಾಚಾರಗಳನ್ನೆಲ್ಲಾ ನನಗೆ ಬರೆಯಬೇಕು. ನಿನ್ನ ಪತ್ರದಲ್ಲಿ ಆಗಾಗ್ಯೆ ಕ್ಷಣವಾದರೂ ನಿನ್ನನ್ನು ಸಾಕ್ಷಾತ್ತಾಗಿ ನೋಡುತ್ತೇನೆ. "ಇಂಡಿಯನ್ ಮಿರರ್" ನ ಮಹಾಮನಸ್ಕರಾದ ಸಂಪಾದಕ ಮಹಾಶಯರು ನನ್ನ ವಿಷಯದಲ್ಲಿ ಏಕಪ್ರಕಾರವಾಗಿ ಕೃಪೆಗೈಯುತ್ತಿದ್ದಾರೆ. ಅದಕ್ಕಾಗಿ ಅವರಿಗೆ ನನ್ನ ಸ್ನೇಹಭಾವವನ್ನೂ ಕೃತಜ್ಞತೆಯನ್ನೂ ತಿಳಿಸು.

ನಾನೀ ದೇಶವನ್ನೆಂದು ಬಿಟ್ಟುಬರುವೆನೋ ನಾನರಿಯೆ. ನಿಮ್ಮ ಥಿಯಸಾಫಿಕಲ್ ಸೊಸೈಟಿಯ ಮಿ|| ಜಜ್ ಅವರ ಹಾಗೆಯೇ ಇತರ ಸಭ್ಯರನೇಕರ ಪರಿಚಯವಾಗಿದೆ ನನಗೆ. ಅವರೆಲ್ಲರೂ ದೊಡ್ಡ ಮನುಷ್ಯರು, ಇನ್ನೇನೆಂದರೆ ಸುಶಿಕ್ಷಿತರು.

ಮಿ|| ಜಜ್ ಅವರು ಬಹಳ ಶ್ರಮಪಟ್ಟು ಕೆಲಸ ಮಾಡತಕ್ಕವರು. ಅವರು ಥಿಯಸಾಫಿ ಪ್ರಚಾರಕ್ಕಾಗಿ ತಮ್ಮ ಜೀವನವನ್ನೇ ಸಂಪೂರ್ಣವಾಗಿ ಅರ್ಪಿಸಿದ್ದಾರೆ. ಈ ದೇಶದಲ್ಲಿ ಇದರ (ಥಿಯಸಾಫಿ) ಭಾವವು ಜನರಲ್ಲಿ ಚನ್ನಾಗಿ ವ್ಯಾಪಿಸಿದೆ. ಆದರೆ ಆಚಾರನಿಷ್ಠರಾದ ಕಿರಸ್ತಾನರ ಮನಸ್ಸಿಗೆ ಅದು ಒಪ್ಪದು. ಅದು ಅವರದೇ ತಪ್ಪು. ಆರು ಕೋಟಿ ಮುವ್ವತ್ತು ಲಕ್ಷ ಪ್ರಜೆಗಳಲ್ಲಿ ಒಂದು ಕೋಟಿ ಒಂಭತ್ತು ಲಕ್ಷ ಮಂದಿ ಕ್ರಿಸ್ತಧರ್ಮದ ಒಂದಲ್ಲದಿದ್ದರೆ ಮತ್ತೊಂದು ಶಾಖಾನುವರ್ತಿಗಳು, ಉಳಿದವರು ಯಾವ ಬಗೆಯ ಧರ್ಮಾನುಯಾಯಿಗಳೆಂದೂ ಹೇಳಲಾಗುವುದಿಲ್ಲ. ಯಾರಿಗೆ ಸ್ವಭಾವತಃ ಧರ್ಮವಾವುದೂ ಇಲ್ಲವೋ ಅಂತಹವರಿಗೆ ಥಿಯಸಾಫಿಸ್ಟರು ಯಾವುದೋ ಪ್ರಕಾರದ ಧರ್ಮವನ್ನು ಕೊಟ್ಟು ಕೃತಕಾರ್ಯರಾಗುತ್ತಾರೆ. ಇದರಿಂದ ನಿಷ್ಠರಾದ ಕಿರಸ್ತಾನರಿಗೆ ಪ್ರತಿಬಂಧಕವೇನು ? ಅದನ್ನು ನಾನು ತಿಳಿಯಲಾರೆನು. ಆದರೆ ಶುದ್ಧವಾದ ನೈತಿಕ ಕ್ರಿಸ್ತಧರ್ಮವು ಈ ದೇಶವನ್ನು ಬಲು ಬೇಗನೆ ಬಿಟ್ಟು ಓಡಿಹೋ

ಗಿರುತ್ತದೆ. ಇಲ್ಲಿ ನಾವು ನೋಡುವ ಕ್ರಿಸ್ತಧರ್ಮಕ್ಕೂ ಭಾರತದಲ್ಲಿಯ ಕ್ರಿಸ್ತಧರ್ಮಕ್ಕೂ ಇಷ್ಟು ದೂರವೆಂಬುದನ್ನು ಹೇಳಲಾಗದು.

ಎಲೈ ! ಧರ್ಮಪಾಲ ! ನೀನು ಕೇಳಿದರೆ ನಿನಗೆ ಆಶ್ಚರ್ಯವಾಗುವುದು. ಈ ದೇಶದಲ್ಲಿ ಎಪಿಸ್ಕೋಪಲ್ ಎಂದೂ ಪ್ರೆಸಿಬಿಟೇರಿಯನ್ ಎಂದೂ ಇರುವ ಸಾಂಪ್ರದಾಯಿಕರ ಧರ್ಮಾಚಾರ್ಯರುಗಳಲ್ಲಿ ನನಗೆ ಸ್ನೇಹಿತರನೇಕರಿದ್ದಾರೆ. ನಿನ್ನಂತೆ ಅವರೂ ಉದಾರ ಹೃದಯರು; ಇನ್ನೂ ಸ್ವಧರ್ಮದಲ್ಲಿ ಅಕಪಟವಾದ ವಿಶ್ವಾಸವುಳ್ಳವರು. ನಿಜವಾದ ಧಾರ್ಮಿಕರು ಎಲ್ಲೆಲ್ಲಿಯೂ ಉದಾರಭಾವವುಳ್ಳವರು. ಅವರಲ್ಲಿ ಪ್ರೇಮವೇನುಂಟೋ ಅದರಿಂದ ಅವರು ಜಿತರಾಗಿ ಉದಾರಿಗಳಾಗಲೇ ಆಗುತ್ತಾರೆ. ಯಾರಾದರೆ ಧರ್ಮವನ್ನು ಕೇವಲ ವ್ಯಕ್ತಿಮಾತ್ರವೆಂದು ಬಗೆವರೋ ಅಂತಹವರೇ ಧರ್ಮದೊಳಕ್ಕೆ ಈ ಪ್ರಾಪಂಚಿಕ ವಿತಂಡಾವಾದ ಸ್ವಾರ್ಥಪರತೆಗಳನ್ನು ಎಳೆದು ತರುವಂತಹವರು. ಅವರು ವ್ಯಕ್ತಿ ಎಂಬ ಅಭಿಲಾಷೆಯಿಂದ ಘೋರವಾದ ಸಂಭ್ರಾಂತ ಭಾವಗಳಿಗೆ ಈಡಾಗುತ್ತಾರೆ.

ನಿನ್ನ ಚಿರ ಭ್ರಾತೃಪ್ರೇಮಾಬದ್ಧ,
ವಿವೇಕಾನಂದ.

ಓಂ ನಮೋ ಭಗವತೇ ರಾಮಕೃಷ್ಣಾಯ

೧೮೯೪ ಗ್ರೀಷ್ಮಕಾಲ.

ಪ್ರಿಯ.....................

ನಿನ್ನ ಪತ್ರವು ತಲಪಿ ಸಕಲ ಸಮಾಚಾರವೂ ತಿಳಿಯಲಾಯಿತು..... ....ಶೋಕವಾರ್ತೆಯನ್ನು ಕೇಳಿ ದುಃಖಿತನಾದೆನು. ಈಶ್ವರೇಚ್ಛೆ ! ಇದು ಕಾರ್ಯಕ್ಷೇತ್ರ, ಭೋಗಕ್ಷೇತ್ರವಲ್ಲ. ಕಾರ್ಯ ಮುಗಿದ ಮೇಲೆ ಸಕಲರೂ ಅವರವರ ಮನೆಗೆ ಹೋಗುವರು; ಕೆಲವರು ಮುಂದೆ ಕೆಲವರು ಹಿಂದೆ. ............ಹೋದುದು ಪ್ರಭುವಿನ ಇಚ್ಛೆ! ಪರಮಹಂಸ ದೇವರ ಮಹೋತ್ಸವವು ವಿಶೇಷ ವಿಜೃಂಭಣೆಯಿಂದ ನಡೆಯಿತೆಂಬುದು ಒಳ್ಳೆಯ ಸಮಾ

ಚಾರ. ಅವರ ಹೆಸರು ಎಷ್ಟು ಹರಡಿದರೆ ಅಷ್ಟು ಒಳ್ಳೆಯದು. ಆದರೆ ಒಂದು ವಿಷಯ. ಮಹಾಪುರುಷರು ವಿಶೇಷ ಶಿಕ್ಷೆಯನ್ನು ಕೊಡಲು ಅವತರಿಸುತ್ತಾರೆಯೇ ವಿನಾ ಹೆಸರಿಗಾಗಲ್ಲ. ಆದರೆ ಅವರ ಅನುಯಾಯಿಗಳು ಅವರ ಉಪದೇಶಗಳನ್ನು ನಡೀ ನೀರಿನಲ್ಲಿ ತೇಲಿಬಿಟ್ಟು, ಅವರ ಹೆಸರಿಗಾಗಿ ಗುದ್ದಾಡುತ್ತಾರೆ. ಒಟ್ಟು ಪೃಥ್ವಿಯಲ್ಲೆಲ್ಲಾ ಇದೇ ಕಥೆ. ಜನರು ಅವರ ಹೆಸರನ್ನೆತ್ತಿ ಕೊಂಡಾಡಲಿ ಕೊಂಡಾಡದಿರಲಿ, ನಾನದನ್ನೆಣಿಸೆನು. ಆದರೆ ಅವರ ಉಪದೇಶಗಳನ್ನೂ, ಜೀವನವನ್ನೂ ಅವರ ಸಂದೇಶವನ್ನೂ ಜಗತ್ತಿನಲ್ಲಿ ಹರಡುವುದಕ್ಕಾಗಿ ನನ್ನ ಪ್ರಾಣವನ್ನು ಕೊಡಲು ಸಿದ್ಧನು ನಾನು. ನನಗೆ ಮಹಾಭಯವೇನೆಂದರೆ ದೇವರ ಮನೆ. ದೇವರಮನೆ ಏನೋ ಕೆಟ್ಟುದಲ್ಲ, ಆದರೆ ಅದನ್ನೇ ಸರ್ವಸ್ವವೆಂದೆಣಿಸಿ ಹಳೇಮಾದರಿಯ ಹುಚ್ಚು ಕೆಲಸ ಮಾಡುವ ಮನೋವೃತ್ತಿಯುಳ್ಳ ಕೆಲವರಿರುವರು. ಅದೀಗ ನನ್ನ ಭಯ. ಅವರು ಪುರಾತನವೂ ಅಸಾರವೂ ಆದ ಅನುಷ್ಠಾನಪದ್ಧತಿಯನ್ನು ಆಚರಣೆಯಲ್ಲಿ ಏತಕ್ಕಾಗಿ ತಂದುಬಿಡುವರೆಂಬುದನ್ನು ಒಲ್ಲೆನು ನಾನು. ಕಾರ್ಯ ಮಾಡಬೇಕೆಂಬುದು ಅವರಂತರಂಗದ ಅಭಿಲಾಷೆ. ಆದರೆ ಯಾವ outlet (ಹೊರಗೆ ಹೋಗುವ ದಾರಿ) ಇಲ್ಲದೆ ಅವರ ಶಕ್ತಿಯು ಗಂಟೆ ಬಾರಿಸುವುದರಲ್ಲಿ ವ್ಯಯವಾಗುವುದು.

ನಿಮಗೊಂದು ನೂತನ ಭಾವವನ್ನು ತಿಳಿಸುತ್ತೇನೆ. ಅದನ್ನು ನೀವು ಕಾರ್ಯದಲ್ಲಿ ಮಾಡಿ ತೋರಿಸುವಿರಾದರೆ ಆಗ ನೀವು ಮನುಷ್ಯರೆಂದೂ, ನಿಮ್ಮಿಂದ ಕಾರ್ಯವಾಗುವುದೆಂದೂ ಎಣಿಸುವೆನು. ನೀವೆಲ್ಲರೂ ಸೇರಿ ಒಂದು ಕಟ್ಟುಮಾಡಿಕೊಳ್ಳಿರಿ. ಕೆಲವು ಕ್ಯಾಮೆರಾಗಳೂ, ಕೊಂಚ chemicals (ರಾಸಾಯನಿಕ ದ್ರವ್ಯ) ಬೇಕು. ತರುವಾಯ ಬೇಕಾದುದು ದೊಡ್ಡದೊಂದು ಗುಡಿಸಲು. ಆ ಮೇಲೆ ಬಡಬಗ್ಗರು ಕೆಲವು ಮಂದಿಯನ್ನು ಸೇರಿಸಬೇಕು. ಇಷ್ಟೆಲ್ಲ ಮಾಡಿ, ಅವರಿಗೆ Astronomy (ಜ್ಯೋತಿಷ), Geography (ಭೂಗೋಳ) ಮುಂತಾದುವುಗಳ ಚಿತ್ರಗಳನ್ನು ತೋರಿಸಿ, ಶ್ರೀ ರಾಮಕೃಷ್ಣ ದೇವರ ಉಪದೇಶವನ್ನು ಮಾಡಿರಿ. ಯಾವ ದೇಶದಲ್ಲೇನಿದೆ, ಏನೇನು ನಡೆಯು

ತ್ತಿದೆ, ಈ ಭೂಮಿ ಹೇಗಿದೆ ಇವೇ ಮುಂತಾದವುಗಳ ವಿಷಯವಾಗಿ ಅವರ ಕಣ್ಣುಗಳನ್ನು ತೆರೆಯಿಸುವಂತಹ ಚೇಷ್ಟೆಗಳನ್ನು ನಡೆಯಿಸಿರಿ. ಸಂಜೆ, ನಡುಹಗಲು, ಯಾವಾಗ ಬೇಕಾದರೆ ಆಗ, ಬಡವರೂ ಅಜ್ಞರೂ ಎಷ್ಟೋ ಮಂದಿ ಇರುವರಲ್ಲವೆ ಅವರುಗಳ ಮನೆಗೆ ಹೋಗಿ ಅವರ ಕಣ್ಣುಗಳು ತೆರೆಯುವಂತೆ ಮಾಡಿರಿ. ಪುಸ್ತಕ ಮೊದಲಾದುವುಗಳ ತಂಟೆ ಬೇಡ. ಬಾಯಿ ಮಾತಿನಲ್ಲಿ ಅವರಿಗೆ ಕಲಿಸಿರಿ. ಅನಂತರ ಮೆಲ್ಲ ಮೆಲ್ಲನೆ centre extend (ಕೇಂದ್ರದ ಪ್ರಸಾರವನ್ನು) ಮಾಡಿರಿ. ಇದೆಲ್ಲವೂ ನಿಮ್ಮ ಕೈಲಾಗುತ್ತದೇನು ! ಅಲ್ಲದೆ ಬರೀ ಗಂಟೆ ಬಾರಿಸುವುದೋ !

........... . ಅವರ ಸಕಲ ಸಮಾಚಾರವೂ ಮದ್ರಾಸಿನಿಂದ ಬಂದಿದೆ ನನಗೆ. ಅವರಲ್ಲಿ ಅವರಿಗೆ ಪ್ರೀತಿಹುಟ್ಟಿದೆ. ...........ನೀನು ಮದ್ರಾಸಿಗೆ ಹೋಗಿ ಅಲ್ಲಿ ಕೊಂಚಕಾಲವಿರುವೆಯಾದರೆ, ಅದರಿಂದ ಅನೇಕ ಕಾರ್ಯಗಳಾಗುತ್ತವೆ. ಆದರೆ ನೀನು ಅಲ್ಲಿಗೆ ಹೋಗುವುದಕ್ಕೆ ಮುಂಚೆ ಈ ಕಾರ್ಯವನ್ನಾರಂಭಿಸು. ಸ್ತ್ರೀ ಭಕ್ತರಾದ ಕೆಲವರು ವಿಧವೆಗಳನ್ನು ಶಿಷ್ಯರನ್ನಾಗಿ ಮಾಡುವುದಕ್ಕಾಗುವುದಿಲ್ಲವೇನು ? ಅವರ ತಲೆಗೆ ಕೊಂಚ ವಿದ್ಯೆಯನ್ನು ಹುಯ್ಯುವುದಕ್ಕೆ ನಿನ್ನಿಂದಾಗದೇನು ? ಆಮೇಲೆ ಶ್ರೀ ರಾಮಕೃಷ್ಣದೇವರ ಉಪದೇಶವನ್ನು ಮಾಡುವುದಕ್ಕೂ ಹಾಗೆಯೇ ವಿದ್ಯೆಯನ್ನು ಕೊಡುವುದಕ್ಕೂ ಅವರನ್ನು ಮನೆಮನೆಗೆ ಕಳುಹಿಸುವುದಕ್ಕಾಗುವುದಿಲ್ಲವೇನು ನೀನು ?...........

ಎದ್ದೇಳು ! ಬಾ ! ನಿನ್ನ ಸಂಪೂರ್ಣ ಮನಸ್ಸಿನಿಂದ ಕಾರ್ಯ ಮಾಡು. ಗೊಡ್ಡುಹರಟೆ, ಗಂಟೆ ಬಾರಿಸುವುದು ಇವುಗಳ ಕಾಲ ಹೋಯಿತು. ಎನ್ನ ಹುಡುಗ ! ಕಾರ್ಯ ಮಾಡಬೇಕಪ್ಪ ಈಗ ನೀನು. ಬಂಗಾಳೀಧರ್ಮವೆಷ್ಟುದೂರ ಹೋಗುವುದೋ ನೋಡುತ್ತೇನೆ ನಾನು. .. .........ಅವನಿಗೆ ಬೆಚ್ಚನೆ ಹೊದಿಕೆ ಬೇಕಂತೆ. ಇಲ್ಲಿಯವರು ಬೆಚ್ಚನೆ ಹೊದಿಕೆಯನ್ನು ಯೂರೋಪು ಇಂಡಿಯ ದೇಶಗಳಿಂದ ತರಿಸುತ್ತಾರೆ. ಬೆಚ್ಚನೆ ಹೊದಿಕೆಯನ್ನು ಇಲ್ಲಿ ಎಷ್ಟಕ್ಕೆ ಕೊಂಡುಕೊಳ್ಳಬಹುದೋ ಅದರಲ್ಲಿ ನಾಲ್ಕರಲ್ಲೊಂದು ಭಾಗ ಕ್ರಯಕ್ಕೆ ಅದೇ ಬಟ್ಟೆ ಸಿಕ್ಕುವುದು ಕಲ್ಕ

ತ್ತೆಯಲ್ಲಿ.............ನಾನು ಯುರೋಪಿಗೆ ಎಂದು ಪ್ರಯಾಣ ಬೆಳೆಸು ವೆನೋ ನಾನರಿಯೆ. ನಾನು ಈ ದೇಶದಲ್ಲಿ ಹೇಗೋ ಇದ್ದೇನೆ. ಅಷ್ಟೆ!

ಇದೊಂದು ತಮಾಷೆ ದೇಶ. ಈಗ ಬಿಸಿಲುಕಾಲ. ಈದಿನ ಬಾಗ್ಯ ಬಂಗಾಳದಲ್ಲಿ ಏಪ್ರಿಲ್ ತಿಂಗಳ ಬಿಸಿಲಿನಷ್ಟು ಜೋರಾಗಿದ್ದಿತು. ಈಗ ಅಲ್ಲಾಹಬಾದಿನ ಮಾಘ ಮಾಸದ ಚಳಿ. ನಾಲ್ಕು ಗಂಟೆಗಳೊಳಗೆ ಇಷ್ಟು ಹೆಚ್ಚು ಕಡಮೆ. ಇಲ್ಲಿಯ ಹೊಟೇಲುಗಳ ಸಮಾಚಾರವನ್ನು ಒರ್ಣಿಸಲ ಳವಲ್ಲ. ಒಂದು ಹೋಟೇಲಿರುವುದು ನ್ಯೂಯಾರ್ಕಿನಲ್ಲಿ. ಅಲ್ಲಿ ಉಳಿದು ಕೊಳ್ಳುವುದಕ್ಕೆ ದಿನ ಒಂದಕ್ಕೆ ೫,೦೦೦ ರೂ. ತನಕ ಬಾಡಿಗೆ, ಭೋಜನದ ಖರ್ಚನ್ನುಳಿದು. ಭೋಗ ವಿಲಾಸದ ದೇಶವೆಂದರೆ ಯುರೋಪಿನ ಲ್ಲಿಯೂ ಇಂತಹುದಿಲ್ಲ. ಪೃಥ್ವಿಯಲ್ಲೆಲ್ಲಾ ಇದೇ ನಿಜವಾಗಿಯೂ ಅತ್ಯಂತ ಸಂಪತ್ತುಳ್ಳದೇಶ. ನೀರು ಹರಿಯುವ ಹಾಗೆ ಹಣ ಖರ್ಚಾಗುತ್ತದೆ. ನಾನು ಹೊಟೇಲಿನಲ್ಲಿರುವುದು ಅಪರೂಪ. ನಾನಿಲ್ಲಿ ಬಹಳವಾಗಿ ಇಲ್ಲಿಯ ದೊಡ್ಡ ಮನುಷ್ಯರ ಅತಿಥಿ. ಅವರಿಗೆ ನಾನು ಚನ್ನಾಗಿ ತಿಳಿದವನಾಗಿ ದ್ದೇನೆ. ಈಗ ದೇಶವೇ ನನ್ನನ್ನು ಬಲ್ಲುದು. ಆದುದರಿಂದ ನಾನು ಹೋ ದೆಡೆ ನನ್ನನ್ನು ಜನರು ಆದರದಿಂದ ತಮ್ಮ ತಮ್ಮ ಮನೆಗೆ ಕರೆದೊಯ್ಯು ತ್ತಾರೆ. ಹ...............ಅವರ ಮನೆ ಷಿಕಾಗೋವಿನಲ್ಲಿ ನನ್ನ centre (ಕೇಂದ್ರ). ಅವರ ಪತ್ನಿಯನ್ನು ನಾನು ತಾಯೆ! ಎಂದು ಸಂಬೋಧಿಸು ತ್ತೇನೆ. ಅವರ ಹೆಣ್ಣುಮಕ್ಕಳು ನನ್ನನ್ನು ದಾದಾ (ಅಣ್ಣಾ)! ಎಂದು ಕರೆಯುತ್ತಾರೆ. ಅಷ್ಟು ಪವಿತ್ರ ದಯಾಳು ಕುಟುಂಬವನ್ನು ನಾನಾದರೆ ಎಂದೂ ನೋಡಿಲ್ಲ. ಎನ್ನ ಒಡಹುಟ್ಟಿದವನೆ! ಹಾಗಿಲ್ಲದಿದ್ದರೆ ಅವರ ಮೇಲೆ ಭಗವತ್ಕೃಪೆ ಇಷ್ಟೇಕೆ? ಅವರ ದಯೆ ಎಷ್ಟು? ಇಂತಹ ಸ್ಥಳದಲ್ಲಿ ಬಡವನಾವನೋ ಕಷ್ಟ ಪಡುತ್ತಿದ್ದಾನೆಂಬ ಸಮಾಚಾರವನ್ನು ಕೇಳಿದರೆ ಗಂಡಸರೂ ಹೆಂಗಸರೂ ಅಲ್ಲಿಗೆ ಹೋಗುತ್ತಾರೆ. ಅವನಿಗೆ ಅನ್ನ ಬಟ್ಟೆ ಕೊಡುತ್ತಾರೆ. ಅವನಿಗೆ ಕೆಲಸವನ್ನು ಒದಗಿಸಿಕೊಡುತ್ತಾರೆ. ಏನು ಮಾಡುತ್ತೇವೆ ನಾವು!

ಅವರು ಬಿಸಿಲುಕಾಲದಲ್ಲಿ ತಮ್ಮ ಮನೆಗಳನ್ನು ಬಿಟ್ಟು ವಿದೇಶಕ್ಕಾ ಗಲಿ. ಸಮುದ್ರ ತೀರಕ್ಕಾಗಲಿ ಹೋಗುತ್ತಾರೆ. ನಾನು ಕೂಡ ಯಾವು

ದೋ ಒಂದು ಸ್ಥಳಕ್ಕೆ ಹೋಗುವೆನು. ಆದರೆ ಇಂತಹ ಜಾಗವೆಂದು ನಾನಿನ್ನೂ ಗೊತ್ತುಮಾಡಿಲ್ಲ. ಇತರ ಸಕಲ ವಿಷಯಗಳಲ್ಲಿ, ನೀನು ನೋಡುವಂತೆ ಇಂಗ್ಲೀಷಿನವರ ಹಾಗೆಯೇ ಇದ್ದಾರೆ. ಇಲ್ಲಿ ಪುಸ್ತಕ ಮುಂತಾದುವು ಇರುವುವಷ್ಟೆ! ಆದರೆ ಅವು ಬಹು ಪ್ರಿಯ. ಇಲ್ಲಿ ನಾವು ಕೊಡುವ ಹಣಕ್ಕೆ ಬರುವ ಸಾಮಾನಿನ ಐದರಷ್ಟು ಕಲ್ಕತ್ತೆಯಲ್ಲಿ ಬರುತ್ತದೆ. ಎಂದರೆ, ಇವರು ವಿದೇಶಿ ಮಾಲುಗಳನ್ನು ತಮ್ಮ ದೇಶದೊಳಕ್ಕೆ ಬರಗೊಡಿಸುವುದಿಲ್ಲ. ಅವುಗಳ ಮೇಲೆ ಹೆಚ್ಚಾಗಿ ಸುಂಕ ಹಾಕುತ್ತಾರೆ. ಇದರ ಫಲವೇನೆಂದರೆ, ದಾರಣೆಮಾಸಿ ಏರುತ್ತದೆ. ಇದಲ್ಲದೆ ಇವರಿಗೆ ಬಟ್ಟೆಬರೆ ಮುಂತಾದುವುಗಳನ್ನು ತಯಾರು ಮಾಡುವುದರಲ್ಲಿ ಹೆಚ್ಚಾದ ಆಸಕ್ತಿಯಿಲ್ಲ. ಯಂತ್ರ ಸಾಧನ ಮುಂತಾದ ಸಾಮಾನುಗಳನ್ನು ತಯಾರು ಮಾಡುತ್ತಾರೆ. ಗೋಧಿ, ಹತ್ತಿ ಮುಂತಾದುವುಗಳನ್ನು ಬೆಳೆಯುತ್ತಾರೆ. ಆದುದರಿಂದ ಅವು ಸುಮಾರಾಗಿ ಅಗ್ಗ. ಈಗ ಇಲ್ಲಿ 'ಹಿಲ್ಸ ಮೀನು ಬಹಳವಾಗಿ ಸಿಕ್ಕುತ್ತದೆ. ಹೊಟ್ಟೆ ತುಂಬ ತಿನ್ನು, ಎಲ್ಲವೂ ಭಸ್ಮವಾಗುತ್ತದೆ. ಇಲ್ಲಿ ಬಗೆಬಗೆಯ ಹಣ್ಣುಗಳುಂಟು. ಬಾಳೆ, ನಿಂಬೆ, ಶೀಬೆ, ಸೇವು, ಬಾದಾಮಿ, ದ್ರಾಕ್ಷಿ ಇವು ಸಮೃದ್ಧಿ. ಇನ್ನೂ ಅನೇಕ ವಿಧ ಹಣ್ಣುಗಳು ಕಾಲಿಫೋರ್ನಿಯಾಯಿಂದ ಬರುತ್ತವೆ. ಅನಾನಾಸ್ ಹಣ್ಣು ಬೇಕಾದಷ್ಟು ಸಿಕ್ಕುತ್ತದೆ. ಆದರೆ ಮಾವು ಲಿಚಿ ಈ ತರಹದವು ಇಲ್ಲಿಲ್ಲ.

ಇಲ್ಲಿ ಒಂದು ಬಗೆಯ ತರಕಾರಿ ಇದೆ, Spinach. ಅದನ್ನು ಅಡುಗೆ ಮಾಡಿದರೆ ಅದರ ರುಚಿ ನಮ್ಮ 'ನಟೆ'ಯ ಹಾಗೆ. ಇನ್ನೊಂದು ಬಗೆಯದನ್ನು asparagus ಎಂದು ಕರೆಯುತ್ತಾರೆ. ಅದರ ರುಚಿ ಎಳೆ 'ಡೆಂಗೋ' ಸೊಪ್ಪಿನಂತೆ. ಆದರೆ ಅದರಲ್ಲಿ 'ಚರಾಚರಿ' ಮಾಡುವುದಕ್ಕಾಗುವುದಿಲ್ಲ. ಕಡಲೆ ಇಲ್ಲ ಇಲ್ಲಿ. ಉದ್ದು ಮುಂತಾದ ದ್ವಿದಳಧಾನ್ಯಗಳೂ ಇಲ್ಲ. ಇಲ್ಲಿಯವರಿಗೆ ಅವು ಇರುವುದೇ ತಿಳಿಯದು. ಅನ್ನವಿದೆ; ರೊಟ್ಟಿಯಿದೆ; ಅನೇಕ ವಿಧ ಮೀನು; ಬಗೆಬಗೆಯ ಮಾಂಸ. ಅವರ ಅಡುಗೆ ಫ್ರೆಂಚರದ ಹಾಗೆ. ಹಾಲಿದೆ, ಮೊಸರು ಬಹಳ ಅಪೂರ್ವ. ಆದರೆ ಬೇಕಾ

ದಷ್ಟು ಮೊಸರಿನ ನೀರು ಸಿಕ್ಕುತ್ತದೆ. Cream (ಹಾಲಿನ ಕೆನೆಯು)ನ್ನು ಯಾವಾಗಲೂ ಉಪಯೋಗಿಸುತ್ತಾರೆ. ಟೀ ಕಾಪಿ ಎಲ್ಲಕ್ಕೂ ಹಾಕು ತ್ತಾರೆ ಅದನ್ನು. ಕಾಯಿಸಿದ ಹಾಲಿನ ಮೇಲೆ ಹೆಪ್ಪುಗಟ್ಟಿಕೊಳ್ಳುವ ಗಟ್ಟಿ ಕೆನೆ ಅಲ್ಲ ಅದು. ಇಲ್ಲಿ ಬೆಣ್ಣೆ ಸಿಕ್ಕುತ್ತದೆ. Ice water (ನೀರ್ಗ ಲ್ಲು ಅಥವಾ ಮಂಜಿನಗಡ್ಡೆ ಹಾಕಿದ ನೀರು) ಯಥೇಷ್ಟವಾಗಿದೆ. ಬಿಸಿಲು ಕಾಲವಾಗಲಿ, ಚಳಿಗಾಲವಾಗಲಿ, ನೆಗಡಿ ಜ್ವರ ಏನಿರಲಿ ಅದನ್ನು ಕುಡಿ ಯುತ್ತಾರೆ. ಇವರು ವೈಜ್ಞಾನಿಕರು. ನೀರ್ಗಲ್ಲು ನೀರು ನೆಗಡಿ ಯನ್ನು ಹೆಚ್ಚಿಸುತ್ತದೆಂದರೆ ನಗುತ್ತಾರೆ ಇಲ್ಲಿಯವರು. ಅದನ್ನು ಎಷ್ಟು ಹೆಚ್ಚಾಗಿ ಕುಡಿದರೆ ಅಷ್ಟು ಒಳ್ಳೆಯದೆಂಬುದು ಅವರ ಮತ Ice cream ಸಮೃದ್ಧಿ, ಅದರ ಆಕಾರ ನಾನಾವಿಧ. ನಯಾಗರಾ Falls (ಜಲಪಾತ, ಚಂಚು) ನ್ನು ಹರಿ ಕೃಪೆಯಿಂದ ಏಳೆಂಟು ಸಾರಿ ನೋಡಿ ದ್ದೇನೆ ನಾನು. ಬಹಳ grand (ಮಹತ್ತಾದುದು ಮತ್ತು ಉಚ್ಚಭಾ ವೋದ್ದೀಪಕವಾದುದು) ಅಷ್ಟೆ! ಆದರೆ ಅದರ ವಿಷಯವಾಗಿ ಎಷ್ಟು ಕೇಳಿ ದ್ದೀಯೋ ಅಷ್ಟಿಲ್ಲ. ಶೀತ ಕಾಲದಲ್ಲಿ ಒಂದು ದಿವಸ Aurora Borealis* ಇತ್ತು............ಇದೆಲ್ಲ ಎಳೆಗೂಸಿನ ತೊದಲ್ನುಡಿ! ಅಂತಹ ದನ್ನು ಕೇಳುವುದಕ್ಕೆ ನನಗೀ ಜನ್ಮದಲ್ಲಿ ಹೆಚ್ಚು ಕಾಲವಿಲ್ಲ. ಮುಂದಣ ಮೈಯಲ್ಲಿ ಅದು ನನ್ನಿಂದಾಗುವುದಾದರೆ ಸಾಕು.

....ಇಷ್ಟು ಕಾಲ ಬಲು ಚೆನ್ನಾಗಿ ನಡೆಯಿತೆಂಬುದು ತಿಳಿಯಿತು..... ಅವರಿಗೆ ಈಗ ರೋಗ ಸಂಪೂರ್ಣವಾಗಿ ವಾಸಿಯಾಗಿದೆ ಎಂಬುದು ನನ್ನ ಕೋರಿಕೆ. ಅವನಿಗೆ ಪೋಲಿ ಬುದ್ಧಿ ಇನ್ನೂ ಹೋಗಿಲ್ಲ. ಬೇಕಾದುದು power of organisation (ಸಂಘ ಚಾಲನಾ ಶಕ್ತಿ ಎಂದರೆ ಕಟ್ಟು ಮಾಡಿ ಕಾರ್ಯ ನಡೆಯಿಸುವ ಶಕ್ತಿ) ತಿಳಿಯಿತೆ? ನಿಮ್ಮಲ್ಲಿ

---

*ಪೃಥ್ವಿಯ ಉತ್ತರ ವಿಭಾಗದಲ್ಲಿ ರಾತ್ರಿ ಕಾಲದಲ್ಲಿ (ಹಾಗೆಯೇ ೬ ತಿಂಗಳು ಕಾಲ ಪ್ರತಿ ರಾತ್ರಿ ನಭೋ ಮಂಡಲದಲ್ಲಿ ಆಗಾಗ್ಗೆ ಒಂದು ಬಗೆಯ ಕಂಪನವಾನವಾದ ವೈದ್ಯುತಿಕ ಜ್ಯೋತಿ ಕಾಣುತ್ತದೆ. ಅದು ನಾನಾ ಆಕಾರಗಳುಳ್ಳುದಾಗಿಯೂ ಬಗೆ ಬಗೆಯ ಬಣ್ಣಗ ಳಿಂದ ಕೂಡಿದುದಾಗಿಯೂ ಇರುತ್ತದೆ. ಅದನ್ನು 'ಅರೋರಾ ಬೋರಿಯಾಲಿಸ್'' ಎಂದು ಕರೆಯುತ್ತಾರೆ.

ಯಾರಿಗಾದರೂ ತಲೆಯಲ್ಲಿ ಅಷ್ಟು ಮಟ್ಟು ಬುದ್ಧಿಯಿರುವದೇನು? ಇದ್ದಲ್ಲಿ ನಿಮ್ಮ ಬುದ್ಧಿಯು ಕಾರ್ಯ ಮಾಡಲಿ. ಅವನು ಮಾಡಲು ಶಕ್ತನು. ಆತನಿಗೆ originality (ಮೌಲಿಕತೆ ಎಂದರೆ ನೂತನ ಕಲ್ಪನಾಶಕ್ತಿ) ಬಲು ಕಡಮೆ. ಆದರೆ good workman persevering (ಒಳ್ಳೆಯ ಕೆಲಸಗಾರ, ಪಟ್ಟುಹಿಡಿದು ಕಾರ್ಯ ಮಾಡತಕ್ಕವನು). ಇದೇನೋ ಆವಶ್ಯಕವು. ಇನ್ನು ಒಳ್ಳೆಯ executive (ಕಾರ್ಯ ನಡೆಯಿಸತಕ್ಕವನು), ಕೆಲಬರು ಶಿಷ್ಯರು ಬೇಕು ನಮಗೆ. ಎಂತಹವರೆಂದರೆ fiery young men (ಬೆಂಕಿ ಚೂರಿನಂತಹವರು) ತಿಳಿಯಿತೇನು ನಿನಗೆ? ಅವರು intelligent and brave (ಬುದ್ಧಿವಂತರೂ ಸಾಹಸಿಗಳೂ) ಆಗಿರಬೇಕು. ಯಮನ ಬಾಯಿಗೆ ತುತ್ತಾಗುವುದಕ್ಕೆ ಹಿಂಜರಿಯದವರಾಗಿರಬೇಕು. ಈಜಿಕೊಂಡು ಸಮುದ್ರವನ್ನು ದಾಟುವುದಕ್ಕೆ ಸಿದ್ಧರಾಗಿರಬೇಕು. ಇಂತಹವರು ನೂರಾರು ಮಂದಿ ಬೇಕು, ಗಂಡಸರೂ ಹೆಂಗಸರೂ. ಈ ಉದ್ದೇಶ ಸಾಧನೆಗಾಗಿ ನಿನ್ನ ಪ್ರಾಣವನ್ನು ಕೊಟ್ಟು ಕೆಲಸ ಮಾಡು. ಬೇಕಾದಹಾಗೆ ಶಿಷ್ಯರನ್ನು ಮಾಡಿಕೊಂಡು ಅವರನ್ನು ನಮ್ಮ purity drilling machine (ಪವಿತ್ರತೆಯ ಸಾಧನ ಯಂತ್ರ)ದಲ್ಲಿ ತೂರಿಸಿ ತೆಗೆ.

ಪರಮಹಂಸದೇವರು ನರೇನನನ್ನು ಹಾಗೆ ಕರೆಯುತ್ತಿದ್ದರು, ಹೀಗೆ ಕರೆಯುತ್ತಿದ್ದರು, ಅವನು ಅದ್ಭುತ ಪುರುಷ, ಅವನು ಅತಿ ಬುದ್ಧಿವಂತ ಎಂದು ಮುಂತಾದ ಹುಚ್ಚು ಹರಟೆಯನ್ನು Indian Mirror ಪತ್ರಿಕೆಗೆ ನೀನೇತಕ್ಕೆ ತಿಳಿಸಿದೆ? ಪರಮಹಂಸರಿಗೆ ಬೇರೆ ಕಾರ್ಯವಾವುದೂ ಇಲ್ಲದಿದ್ದ ಹಾಗೆ. ಇದೆಲ್ಲ ಏನು! ನಿರರ್ಥಕವಾದ thought reading (ಅನ್ಯನ ಮನಸ್ಸಿನಲ್ಲಿರುವುದನ್ನು ಅರಿಯುವಿಕೆ) ಮತ್ತು nonsense (ಮರುಳುತನ).

..............ಅವರಿಗೂ, ..............ಅವರಿಗೂ ನನ್ನ ದಂಡವತ್, ಲಾಷ್ಟವತ್, ಇಷ್ಟಿಕವತ್, ಛತ್ರೀವತ್ ಅನೇಕಾನೇಕ ಪ್ರಣಾಮಗಳನ್ನು ತಿಳಿಸು. .......ನು ನಿನ್ನಲ್ಲಿ ಅಡಿಗಡಿಗೆ ಬಂದು ಹೋಗುತಲಿರುವುದು ಬಲು ಒಳ್ಳೆಯದು. ಜಿ............ಅವರಿಗೆ ಪತ್ರ ಬರೆಯುವುದುಂಟೇನು?

ಆತನಿಗೆ ನನ್ನ ಪ್ರೇಮವನ್ನು ತಿಳಿಸಿ ಅವನನ್ನು ನೋಡಿಕೋ. ಸರಿಬರು ವುದೆಲ್ಲವೂ ಕಾಲಕ್ರಮದಲ್ಲಿ ಮೆಲ್ಲಮೆಲ್ಲನೆ. ಹೆಚ್ಚಾಗಿ ಪತ್ರಗಳನ್ನು ಬರೆಯಲು ನನಗೆ ಅಧಿಕಾವಕಾಶ ದೊರೆಯದು. Lecture (ಉಪನ್ಯಾಸ) ಮುಂತಾದುವುಗಳನ್ನು ನಾನು ಮೊದಲು ಬರೆಯುವುದಿಲ್ಲ. ಒಂದನ್ನು ಮಾತ್ರ ಮೊದಲೇ ಬರೆದೆನು. ಅದನ್ನು ನೀವು ಅಚ್ಚು ಹಾಕಿಸಿದ್ದೀರಿ. ಉಳಿದುವನ್ನೆಲ್ಲ ಆಯಾ ಸಮಯಕ್ಕೆ ನನಗೆ ತೋಚಿದಂತೆ ಹೇಳಿದ್ದೇನೆ. ಗುರುದೇವ ನನ್ನ ಬಳಿ ಇದ್ದಾನೆ. ಕಾಗದ ಲೇಕಣಿಗಳ ತಂಟೆಗೆ ಹೋಗುವುದಿಲ್ಲ ನಾನು. ಒಂದು ಸಾರಿ ಡಿಟ್ರಾಯಿಟ್'ನಲ್ಲಿ ಮೂರು ಗಂಟೆಗಳ ಕಾಲ ಬಿಡದೆ ಮಾತನಾಡಿದೆನು. 'ನಿನ್ನ ತಲೆಯಲ್ಲಿ ಇಷ್ಟಿದೆಯೇ' ಎಂದು ಆಗಾಗ್ಗೆ ನನಗೇ ಆಶ್ಚರ್ಯ. ನಾನೊಂದು ಪುಸ್ತಕವನ್ನು ಬರೆಯಬೇಕೆಂದು ಇಲ್ಲಿ ಎಲ್ಲರೂ ಹೇಳುತ್ತಾರೆ. ಈ ಸಾರಿ ಏನಾದರೂ ಬರಿಗಿರಿಯುವುದಕ್ಕಾಗುತ್ತದೆಯೇ ನೋಡುತ್ತೇನೆ. ಅದೇ ಕಷ್ಟ! ಎನ್ನೊಡಹುಟ್ಟಿದವನೇ! ಕಾಗದವನ್ನೂ ಪೇನವನ್ನೂ ತೆಗೆದುಕೊಂಡು ಬರೆಯುವ ತಂಟೆ ಹಚ್ಚಿಕೊಳ್ಳುವವರಾರು ?

ಸಮಾಜವನ್ನೂ ಜಗತ್ತನ್ನೂ electrify (ವಿದ್ಯುಚ್ಚಕಿತರನ್ನಾಗಿ) ಮಾಡಬೇಕು. ಗೊಡ್ಡುಹರಟೆ ಗಂಟೆ ಅಳ್ಳಾಡಿಸುವ ಕಾರ್ಯ ಸಾಕು. ಗಂಟೆ ಹೊಡೆಯುವ ಕಾರ್ಯ ಗೃಹಸ್ಥನದು. ನಿಮ್ಮದಾದರೆ distribution and propagation of thought currents (ಭಾವಪ್ರವಾಹ ವಿಸ್ತಾರ). ಇದನ್ನು ನೀವು ಮಾಡುವಿರಾದರೆ ಸರಿ........ Character formed (ನಡತೆ ನೆಟ್ಟಗಾಗಲಿ). ಆಮೇಲೆ ನಿಮ್ಮ ಬಳಿ ಬರುವೆನು, ತಿಳಿಯಿತೆ! ಎರಡು ಸಾವಿರ, ಅಲ್ಲಪ್ಪ ಹತ್ತುಸಾವಿರ ಅಥವಾ ಇಪ್ಪತ್ತು ಸಾವಿರ ಸನ್ಯಾಸಿಗಳು ಬೇಕು. ಗಂಡಸರೂ ಹೆಂಗಸರೂ ಶಿಷ್ಯರು ಬೇಕು at any risk (ಹೇಗಾದರೂ ಆಗಲಿ). ಅವರಿಗೆ ಹೋಗಿ ಹೇಳು. ನೀನು ಸಂಪೂರ್ಣ ಮನಸ್ಸಿಂದ ಕೆಲಸಮಾಡು. ಗೃಹಸ್ಥ ಶಿಷ್ಯರು ಬೇಡ, ತಿಳಿಯಿತೆ ? ನಿಮ್ಮಲ್ಲಿ ಪ್ರತಿಯೊಬ್ಬನೂ ನೂರು ನೂರು ಮಂದಿಗೆ ತಲೆ ಬೋಳಿಸಿ ಕೂರಿಸಿರಿ. Young educated men, not fools (ಶಿಕ್ಷಿತ ಯುವಕರು ಧಡ್ಡರಲ್ಲ). ಆಗ ನೀವು ಬಹು

ದ್ದೀರರೇ ಸರಿ. ಗಲಾಟೆ ಮಾಡಿ ಗುಲ್ಲೆಬ್ಬಿಸಬೇಕು. ಸುಮ್ಮನೆ ಕುಳಿತಿರುವುದನ್ನು ಬಿಟ್ಟು ಸೊಂಟ ಕಟ್ಟಿ ನೆಟ್ಟಗೆ ಹೋಗಿರಿ. ಮದ್ರಾಸಿಗೂ ಕಲ್ಕತ್ತೆಗೂ ವಿದ್ಯುತ್ತಿನ ಚಕ್ರದಂತೆ ಸಂಬಂಧವನ್ನು ಕಲ್ಪಿಸಿರಿ ನೋಡೋಣ (Let me see you make some electric circuits between Calcutta and Madras).

ಅಲ್ಲಲ್ಲೇ centres (ಕೇಂದ್ರಗಳನ್ನು) ಸ್ಥಾಪಿಸಿರಿ. ಹೆಂಗಸರು ಗಂಡಸರು ಯಾರು ಬರುತ್ತಾರೋ ಅವರಿಗೆ ತಲೆ ಬೋಳಿಸಿ ಸನ್ಯಾಸವನ್ನು ಕೊಡಿರಿ. ಆ ಮೇಲೆ ನಾನು ಬರುತ್ತೇನೆ. ಮಹಾ Spiritual tidal wave (ಆಧ್ಯಾತ್ಮಿಕ ತರಂಗ) ಬರುತ್ತಿದೆ. ಕೀಳನು ಉತ್ತಮನಾಗುತ್ತಾನೆ, ಮೂರ್ಖನು ಮಹಾಪಂಡಿತರ ಗುರುವಾಗುತ್ತಾನೆ ಆತನ ಕೃಪಾ ಬಲದಿಂದ. "ಉತ್ತಿಷ್ಠತ, ಜಾಗ್ರತ ಪ್ರಾಪ್ಯವರಾನ್ನಿಬೋಧತ" (ಏಳಿರಿ ಜಾಗ್ರತೆಗೊಳ್ಳಿರಿ, ನಿಮ್ಮ ಲಕ್ಷ್ಯವನ್ನು ಮುಟ್ಟುವವರೆಗೆ ನಿಲ್ಲದೇ ಡಿರಿ.)

Life is ever expanding, contraction is death (ಹಿಗ್ಗೇ ಜೀವ, ಕುಗ್ಗೇ ಸಾವು). ಯಾವಾತನಾದರೆ ಆತ್ಮಸುಖವನ್ನು ನೋಡಿಕೊಳ್ಳುತ್ತ ಸೋಮಾರಿಯ ಜೀವಯಾತ್ರೆಯನ್ನು ನಡೆಯಿಸುತ್ತಿರುವನೋ ಅವನಿಗೆ ನರಕದಲ್ಲಿಯೂ ಸ್ಥಳವಿಲ್ಲ. ಯಾವನಾದರೆ ಸರ್ವಭೂತದಲ್ಲಿಯೂ ದಯಾಪರನಾಗಿ ಅವುಗಳ ಮೇಲ್ಮೆಗಾಗಿ ದುಡಿಯುವನೋ ಅವನು ಮಾತ್ರ ಶ್ರೀ ರಾಮಕೃಷ್ಣದೇವನ ಪುತ್ರನು. ಇತರೇ ಕೃಪಣಾಃ (ಇತರರು ಬುದ್ಧಿಹೀನರು). ಇಂತಹ ಮಹಾ ಸಂಧಿಪೂಜಾ ಸಮಯದಲ್ಲಿ ಸೊಂಟ ಕಟ್ಟಿಕೊಂಡು ಹಳ್ಳಿಹಳ್ಳಿಗೂ ಮನೆಮನೆಗೂ ಹೋಗಿ ಅವರ ಸಂದೇಶವನ್ನು ವಿಸ್ತರಿಸುತ ಯಾವಾತನಾದರೆ ಹೋಗುವನೋ ಅವನೇ ಎನ್ನ ಒಡಹುಟ್ಟಿದವನು; ಅವನೇ ಅವರ ಮಗನು. ಇದೀಗ test (ಪರೀಕ್ಷೆ). ಯಾವಾತನಾದರೆ ಶ್ರೀ ರಾಮಕೃಷ್ಣದೇವರ ಪುತ್ರನೋ ಅವನು ಆತ್ಮಸುಖವನ್ನು ಬಯಸನು. ಪ್ರಾಣಾತ್ಯಯೇಪಿ ಪರಕಲ್ಯಾಣಚಿಕೀರ್ಷಕಃ (ತಮ್ಮ ಪ್ರಾಣ ಹೋದರೂ ಸರಿಯೆ ಪರರ ಹಿತವನ್ನು ಬಯಸುವವರು ಅವರು). ಯಾರಾದರೆ ತಮ್ಮ ನೆಮ್ಮದಿಯನ್ನು

ತಮ್ಮ ಸುಖಜೀವನವನ್ನು ಮಾತ್ರ ಬಯಸುವರೋ, ಇನ್ನಾರಾದರೆ ತಮ್ಮ ಹಟವನ್ನು ಸಾಧಿಸಲು ಸಕಲರ ತಲೆಗಳನ್ನೂ ಬಲಿ ಕೊಡುವುದಕ್ಕೆ ಸಿದ್ಧರೋ ಅಂತಹವರು ನಮ್ಮವರಲ್ಲ. ಅವರು ದೂರ ಹೋಗಲಿ ಇನ್ನೂ ಕಾಲವಿರುವಾಗಲೇ. ಅವರ ಚಾರಿತ್ರವನ್ನೂ, ಅವರ ಶಿಕ್ಷೆಯನ್ನೂ, ಅವರ ಧರ್ಮವನ್ನೂ ನಾಲ್ಕು ಕಡೆಗೂ ಹರಡಿರಿ. ಇದೇ ಆತ್ಮ ಸಾಧನ, ಇದೇ ಭಜನ, ಇದೇ ಉಪಾಯ, ಇದೇ ಲಕ್ಷ್ಯ. ಏಳಿರಿ! ಏಳಿರಿ! ಮಹಾ ತರಂಗ ಬರುತ್ತಿದೆ. Onward onward (ಮುಂದೆ ಹೋಗಿರಿ, ಮುಂದೆ ಹೋಗಿರಿ). ಹೆಂಗಸರೂ ಗಂಡಸರೂ, ಚಂಡಾಲನ ಪರ್ಯಂತ ಎಲ್ಲರೂ ಪವಿತ್ರರೇ ಅವರ ದೃಷ್ಟಿಯಲ್ಲಿ. ಮುಂದೆನಡೆಯಿರಿ. ಹೆಸರಿಗೆ ಸಮಯವಲ್ಲ, ಯಶಸ್ಸಿಗೆ ಸಮಯವಲ್ಲ, ಮುಕ್ತಿಗೆ ಸಮಯವಲ್ಲ, ಭಕ್ತಿಗೆ ಸಮಯವಲ್ಲ, ಇವಕ್ಕೆ ಬೇರೆ ಸಮಯ ನೋಡೋಣ. ಈಗ ಈ ಜನ್ಮದಲ್ಲಿ ಅವರ ಮಹಾ ಚಾರಿತ್ರವನ್ನೂ, ಅವರ ಮಹಾಜೀವನವನ್ನೂ, ಅವರ ಅನಂತ ಆತ್ಮನನ್ನೂ ಅನಂತವಾಗಿ ವಿಸ್ತರಿಸೋಣ. ಇದೀಗ ಕಾರ್ಯ; ಮಾಡತಕ್ಕದು ಇನ್ನೇನೂ ಇಲ್ಲ. ಅವರ ಹೆಸರು ಎಲ್ಲೆಲ್ಲಿ ಹರಡುವುದೋ ಅಲ್ಲಿ ಕ್ರಿಮಿಕೀಟ ಕೂಡ ದೇವತಾ ಸ್ವರೂಪವನ್ನು ಹೊಂದುವುದು. ಅಲ್ಲಪ್ಪ! ಈಗಾಗಲೇ ಹೊಂದುತ್ತಿದೆ. ನೋಡುವುದಿಲ್ಲವೇನು ನೀನು? ಅದೇನು ಮಕ್ಕಳಾಟನೇ, ಅದೇನು ಹುಚ್ಚು ಹರಟೆಯೇ? ಅದೇನು ಮರುಳುತನವೇ? 'ಉತ್ತಿಷ್ಠತ ಜಾಗ್ರತ.' ಎಲೈ ಹರಿ! ಹರಿ! ಆತನು ನಮ್ಮ ಬಳಿ ಇದ್ದಾನೆ. ಇನ್ನು ಹೆಚ್ಚಾಗಿ ಬರೆಯಲಾರೆನು. Onward (ಮುಂದೆ ಹೋಗು). ಇದನ್ನು ಮಾತ್ರ ಹೇಳುತ್ತೇನೆ. ಯಾರು ಯಾರು ಈ ಪತ್ರವನ್ನು ಓದುವರೋ ಅವರು ಈ ನನ್ನ spirit (ಉತ್ಸಾಹವನ್ನು) ತಿಳಿದುಕೊಳ್ಳುವರು. ಇದನ್ನು ನಂಬು ನೀನು, ಮುಂದೆ ಹೋಗು. ಹರೇ ಹರೇ! ಈ ಪತ್ರವನ್ನು ಹಾಳು ಮಾಡಬೇಡ. ಯಾರೋ ನನ್ನ ಕೈಹಿಡಿದು ಈ ಪ್ರಕಾರ ಬರೆಯಿಸುತ್ತಾರೆ. ಹುಷಾರ್ (ಎಚ್ಚರಿಕೆ) ಆತನು ಬರುತ್ತಿದ್ದಾನೆ. ಯಾರಾರು ಆತನ ಸೇವೆಗಾಗಿ ಅಲ್ಲಪ್ಪ, ಆತನ ಮಕ್ಕಳು, ಬಡವರು, ನೆಲಕ್ಕೆ ಮೆಟ್ಟಿದವರು, ಪಾಪಿಗಳು, ನೊಂದವರು, ಕೀಟಗಳ ತನಕ—ಇವರ ಸೇವೆ

ಗಾಗಿ ಯಾರು ಸಿದ್ಧರಾಗಿರುವರೋ ಅಂತಹವರ ಹೃದಯಗಳಲ್ಲಿ ಆತನು ಕಾಣಿಸಿಕೊಳ್ಳುತ್ತಾನೆ. ಅಂತಹವರ ಮುಖದಲ್ಲಿ ಸಾಕ್ಷಾತ್ ಸರಸ್ವತಿಯೇ ಮಾತನಾಡುವಳು. ಅಂತಹವರ ಹೃದಯಗಳಲ್ಲಿ ಮಹಾಮಾಯಾ ಮಹಾಶಕ್ತಿ ವಾಸಮಾಡುವಳು. ಯಾರಾದರೆ ನಾಸ್ತಿಕರೋ, ಶ್ರದ್ಧಾ ವಿಹೀನರೋ, ನರಾಧಮರೋ, ವಿಲಾಸಿಗಳೋ ಅಂತಹವರಿಗೆ ನಮ್ಮ ಲ್ಲೇನು ಕೆಲಸ? ಅವರು ದೂರ ಹೊರಟು ಹೋಗಲಿ. ಇನ್ನು ಹೆಚ್ಚಾಗಿ ಬರೆಯಲಾರೆ, ಆತನೇ ತಿಳಿಸಲಿ.

ಇತಿ—

ವಿವೇಕಾನಂದ.

ಜಾರ್ಜ್ ಡಬ್ಲ್ಯು. ಹೇಲ್

೫೪೧, ಡಿಯರ್‌ಬರ್ನ್ ಅವೆನ್ಯೂ,

ಚಿಕಾಗೋ, ೧೮೯೪.

ಎನ್ನ ಪ್ರಿಯ.............

ನಿನ್ನ ಪತ್ರವು ಹಸ್ತಗತವಾಗಿ ಅತಿಶಯ ಆನಂದವನ್ನು ಪಡೆದೆನು. ಸ....ಅವನ ಲೀಲೆಗಳನ್ನು ಕೇಳಿ ಬಹಳ ದುಃಖವಾಯಿತೆನಗೆ. ಗುರುವಿಗೆ ತಿರುಮಂತ್ರ ಹೇಳಿಕೊಡುವ ವಿದ್ಯೆ ಕಲಿತರೆ ಈ ಪ್ರಕಾರವಾಗುತ್ತದೆ. ಅಧಿಕ ದೋಷ ನನ್ನದಲ್ಲ. ........ಅವರು ಇಲ್ಲಿಗೆ ಬಂದು ಹತ್ತು ವರುಷಗಳಾದುವು. ಅಧಿಕ ಖ್ಯಾತಿಯನ್ನೂ ಸನ್ಮಾನವನ್ನೂ ಪಡೆದರು ಅವರು. ಈಗ ನನ್ನ ದೆಶೆ ತಿರುಗಿದೆ. ಗುರುದೇವನ ಇಚ್ಛೆ! ನಾನೇನು ಮಾಡಲಿ. ಇದಕ್ಕಾಗಿ ಮ....ಅವರು ಅಸಮಾಧಾನ ಪಡುವುದಾದರೆ ಅದು ಹುಡುಗತನವಷ್ಟೆ! ಇರಲಿ. "ಉಪೇಕ್ಷಿತವ್ಯಂ ತದ್ವಚನಂ ಭವತ್ಸದೃಶಾನಾಂ ಮಹಾತ್ಮನಾಂ। ಅಪಿ ಕೀಟ ದಂಶನ ಭೀರುಕಾಃ ವಯಂ ರಾಮ ಕೃಷ್ಣ ತನಯಾಃ ತದ್ಧೃದಯ ರುಧಿರ ಪೋಷಿತಾಃ ||" "ಅಲೋಕ ಸಾಮಾನ್ಯಮಚಿಂತ್ಯ ಹೇತುಕಂ ನಿನ್ದಂತಿ ಮಂದಾಶ್ಚರಿತಂ ಮಹಾತ್ಮನಾಂ" ಇತ್ಯಾದೀನಿ ಸಂಸ್ಮೃತ್ಯ ಕ್ಷಂತವ್ಯೋಹಯಂ ಜಾಲ್ಮಃ" (ತಮ್ಮಂತಹ ಮಹಾತ್ಮರು ಆತನು ಹೇಳುವುದನ್ನು ಲೆಕ್ಕಿಸಕೂಡದು. ಶ್ರೀ ರಾಮಕೃಷ್ಣ ದೇವರ ಮಕ್ಕಳಾದ ನಾವು ಅವರ ಹೃದಯ ರಕ್ತಪೋಷಿತರಾಗಿ ಈ ಹುಳು

ಗಳ ಕಥಿತಕ್ಕೆಲ್ಲಾದರೂ ಅಂಜುವದುಂಟೆ? ಮಹಾತ್ಮರ ಅಸಾಧಾರಣವೂ ಅದಕಾರಣ ತಿಳಿಯಲಶಕ್ಯವೂ ಆದ ಚಾರಿತ್ರವನ್ನು ದುಷ್ಟರು ನಿಂದಿಸುವರು) (ಕಾಳಿದಾಸನ ಕುಮಾರ ಸಂಭವ). ಇವನ್ನೆಲ್ಲಾ ಜ್ಞಾಪಕದಲ್ಲಿಟ್ಟು ಕೊಂಡು ಈ ಹುಚ್ಚನನ್ನು ಮನ್ನಿಸು ನೀನು. ಈ ದೇಶದವರ ಒಳ ಗಣ್ಣು ತೆರೆದಿರುವದು ಈಶ್ವರೇಚ್ಛೆ. ಅವರ (ಶ್ರೀ ರಾಮಕೃಷ್ಣದೇವರ) ಕಾರ್ಯವನ್ನೂ ಅವರ ಗತಿಯನ್ನೂ ತಡೆಯುವವರಾರು? ನನಗೇನು ಹೆಸರು ಬೇಡ. I want to be a voice without a form (ನಾನು ನಿರಾಕಾರ ವಾಣಿಯಾಗಿರಬೇಕೆಂಬುದು ನನ್ನ ಇಷ್ಟ.) ಹ....ಮೊದಲಾದವರಾರೂ ನನ್ನ ಪಕ್ಷವನ್ನು ಸಮರ್ಥನ ಮಾಡಬೇಕಾದ ಆವಶ್ಯಕತೆಯಿಲ್ಲ. "ಕೋಹಂ ತತ್ಪಾದ ಪ್ರಸರಂ ಪ್ರತಿರೋದ್ಧುಂ ಸಮ ರ್ಥಯಿತುಂ ವಾ ಕೇ ವಾ ಅನ್ಯಾದಯಃ. ತಥಾಪಿ ಮಮ ಹೃದಯ ಕೃತ ಜ್ಞತಾ....ಪ್ರತಿ." (ಆತನ ಪ್ರಭಾವ ಪ್ರಸಾರ ಗತಿಯನ್ನು ತಡೆಯುವುದ ಕ್ಕಾಗಲೀ ಮತ್ತದಕ್ಕೆ ಸಾಹಾಯ್ಯ ಮಾಡುವುದಕ್ಕಾಗಲೀ ನಾನಾರು? ಇತರರು ತಾನೇ ಯಾರು? ಆದರೂ....ಅವರಿಗೆ ನನ್ನ ಮನಃ ಪೂರ್ವಕವಾದ ಕೃತಜ್ಞತೆಯನ್ನರ್ಪಿಸುತ್ತೇನೆ). "ಯಸ್ಮಿನ್ ಸ್ಥಿತೋ ನ ದುಃಖೇನ ಗುರು ಣಾಪಿ ವಿಚಾಲ್ಯತೆ". "ನೈಷ ಪ್ರಾಪ್ತವಾನ್ ತತ್ಪದವೀಮಿತಿ ಮತ್ವಾ ಕರು ಣಾ ದೃಷ್ಟ್ಯಾ ದ್ರಷ್ಟವ್ಯೋಯಮಿತಿ" (ಯಾವ ಸ್ಥಿತಿಯಲ್ಲಿದ್ದುಕೊಂಡು ಮಹದ್ದುಃಖ ಒದಗಿದರೂ ಕದಲದೆ ಇರುವನೋ ಅಂತಹ ಸ್ಥಿತಿಗಾತನಿ ನ್ನೂ ಬಂದಿಲ್ಲವೆಂಬುದನ್ನು ನೀನು ತಿಳಿದು ಆತನನ್ನು ಕಾರುಣ್ಯದೃಷ್ಟಿಯಿಂದ ನೋಡತಕ್ಕುದು. ಈಶ್ವರನ ಕೃಪೆಯಿಂದ ಹೆಸರು ಕೀರ್ತಿಗಳ ಆಸೆ ನನ್ನ ಹೃದಯದಲ್ಲಿ ಮೊಳೆತಿಲ್ಲ. ಅದೆಂದೂ ಅಂಕುರಿಸದೆಂಬುದನ್ನು ಬಲ್ಲೆನು ನಾನು. ಯಂತ್ರ ಮಾತ್ರನು ನಾನು. ಯಂತ್ರೀ ಆತನು. ಈ ಯಂತ್ರ ದ್ವಾರಾ ಆತನು ಈ ದೂರ ದೇಶದಲ್ಲಿಯ ಸಾವಿರಾರು ಜನಗಳ ಹೃದಯ ದಲ್ಲಿ ಧರ್ಮಭಾವವನ್ನು ಉದ್ದೀಪಿತಗೊಳಿಸಿದ್ದಾನೆ. ಇಲ್ಲಿಯ ಸಾವಿರಾರು ಮಂದಿ ನರ ನಾರಿಯರು ನನ್ನಲ್ಲಿ ಪ್ರೀತಿಯಿಟ್ಟು ನನ್ನನ್ನು ಗೌರವಿಸು ತ್ತಾರೆ. "ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೆ ಗಿರಿಂ" (ಆತನಾದರೆ ಮೂಕನನ್ನು ವಾಚಾಲನನ್ನಾಗಿ ಮಾಡುತ್ತಾನೆ. ಕುಂಟ

ನನ್ನು ಬೆಟ್ಟದಾಟುವಂತೆ ಮಾಡುತ್ತಾನೆ). ಆತನ ಕೃಪೆಯನ್ನು ನೋಡಿ ನನಗೇ ಆಶ್ಚರ್ಯ. ನಾನಿಲ್ಲಿ ಯಾವ ಪಟ್ಟಣಕ್ಕೆ ಹೋಗಲೀ ಅಲ್ಲಿ ಗುಲ್ಲು ಗದ್ದಲ. ಅವರು ನನಗೆ "Cyclonic Hindu" (ಎದುರಿಗೆ ಜಡ ದಂತಿರುವುದನ್ನು ಕೂಡ ನಿಜ ಶಕ್ತಿಯಿಂದ ತಲೆಕೆಳಗೆ ಮಾಡುವ ಹಿಂದೂ) ಎಂದು ಹೆಸರು ಕೊಟ್ಟಿದ್ದಾರೆ. ಜ್ಞಾಪಕದಲ್ಲಿಡು I am a voice without a form ಎಂಬುದನ್ನು. ಆತನಿಚ್ಛೆ.

ನಾನು ಇಂಗ್ಲೆಂಡಿಗೆ ಹೋಗುತ್ತೇನೋ ಯಮಲೋಕಕ್ಕೆ ಹೋಗುತ್ತೇನೋ ಈಶ್ವರನಿಗೇ ಗೊತ್ತು. ಎಲ್ಲವನ್ನೂ ಏರ್ಪಾಟು ಮಾಡುವವನು ಆತ. ಈ ದೇಶದಲ್ಲಿ ಒಂದು ಚಿರೂಟಿನ ಬೆಲೆ ಒಂದು ರೂಪಾಯಿ. ಬಾಡಿಗೆ ಗಾಡಿಯಲ್ಲಿ ಕುಳಿತರೆ ಸಾಕು, ಮೂರು ರೂಪಾಯಿಗಳನ್ನು ತೆರಲೇ ಬೇಕು. ಒಂದು ಕೋಟಿನ ಬೆಲೆ ೧೦೦ ರೂ. ಹೋಟಲಿನ ಖರ್ಚು ದಿನ ಒಂದಕ್ಕೆ ರೂ. ೯. ನನಗೆ ಎಲ್ಲವನ್ನೂ ಪ್ರಭು ಒದಗಿಸಿ ಕೊಡುತ್ತಾನೆ. ........ಹೇ ಪ್ರಭೋ! ನಿನಗೆ ಜಯವಾಗಲಿ। ನಾನೇನೂ ಅರಿಯೆ.

"ಸತ್ಯಮೇವ ಜಯತಿ ನಾನೃತಂ; ಸತ್ಯೇನೈವಪನ್ಥಾಃ ವಿತತೋ ದೇವಯಾನಃ" ಸತ್ಯಕ್ಕೇ ಜಯ, ಸುಳ್ಳಿಗಲ್ಲ; ಸತ್ಯದಿಂದಲೇ ದೇವಯಾನ ಮಾರ್ಗಲಾಭ (ಪ್ರಶ್ನೋಪನಿಷತ್). ನೀನು ನಿರ್ಭಯನಾಗಿರಬೇಕು. ಯಾವನಾದರೆ ಅಂಜಿ ಆತ್ಮ ಸಮರ್ಥನ ಮಾಡುವನೋ ಅವನೇ ಹೇಡಿ.

ನಮ್ಮಲ್ಲಿ ಯಾರೂ ನನ್ನ ಪಕ್ಷವನ್ನು ಸಮರ್ಥಸಮಾಡಲು ಮುಂದೆ ಬರುವ ಆವಶ್ಯಕತೆಯಿಲ್ಲ. ಮದ್ರಾಸು ರಾಜಪುತ್ರ ಸ್ಥಾನಗಳ ಸಮಾಚಾರಗಳು ನನಗೆ ಆಗಾಗ್ಯೆ ಬರುತ್ತವೆ. ಎಲ್ಲ ಸಮಾಚಾರಗಳೂ ಬಂದಿವೆ. ಹದಿನಾಲ್ಕು ಸಾವಿರ ಮೈಲಿಗಳ ದೂರದಲ್ಲಿ ನೋಡತಕ್ಕ ಕಣ್ಣುಗಳೂ ಉಂಟು. ಇದೇನೋ ನಿಜ. ಈಗ ಸುಮ್ಮನಿರು. ಸಕಾಲದಲ್ಲಿ ಬೈಲಿಗೆ ಬರುವುದೆಲ್ಲವೂ. ಅವರಿಚ್ಛೆ ಎಷ್ಟೋ ಅಷ್ಟು. ಅವರ ಮಾತೊಂದೂ ಸುಳ್ಳಾಗದು. ಎನ್ನ ಒಡಹುಟ್ಟಿದವನೇ! ನಾಯಿ ಬೆಕ್ಕುಗಳು ಕಾದಾಡಿದರೆ ಅದನ್ನು ನೋಡಿ ಮನುಷ್ಯನು ವ್ಯಸನಪಡುವನೇನು? ಹಾಗೆಯೇ ಸಾಮಾನ್ಯರ ಈರ್ಷ್ಯ, ಹೊಟ್ಟೆಕಿಚ್ಚು, ಗುದ್ದಾಟ ಇವುಗಳನ್ನು ನೋಡಿ

ಅವನ್ನು ಮನಸ್ಸಿಗೆ ಹಚ್ಚಿಕೊಳ್ಳುವುದು ನಿನಗುಚಿತವಲ್ಲ. ದಾದಾ! ಈಗ ಆರು ತಿಂಗಳಿಂದಲೂ ಹೇಳುತ್ತಿದ್ದೇನಪ್ಪ ಫರದೆ ಮೇಲಕ್ಕೇಳುತ್ತದೆ, ಸೂರ್ಯೋದಯವಾಗುತ್ತದೆ ಎಂದು. ಹೌದಯ್ಯಾ ಫರದೆ ಮೇಲಕ್ಕೇಳುತ್ತದೆ ಕ್ರಮೇಣ. Slow but sure (ಮೆಲ್ಲ ಮೆಲ್ಲನೆ ಆದರೆ ನಿಶ್ಚಿತವಾಗಿ). ಕಾಲದಲ್ಲಿ ಪ್ರಕಾಶವಾಗುತ್ತದೆ. ಆತನಿಗೆ ಗೊತ್ತಪ್ಪ, ಮನಸ್ಸಿನಲ್ಲೇನುಂಟೋ ಅದನ್ನು ಹೊರಪಡಿಸುವದಕ್ಕಾಗದು: ಇವುಗಳನ್ನು ಬರೆಯುವುದಕ್ಕಾಗದು.

..........ಚುಕ್ಕಾಣಿಯನ್ನು ಬಿಟ್ಟುಬಿಡಬೇಡ. ಬಲವಾಗಿ ಹಿಡಿದುಕೊ. ನಮ್ಮ ಮಾರ್ಗವೇನೋ ಸರಿ, ಅದರಲ್ಲಿ ತಪ್ಪಿಲ್ಲ. ಆದರೆ ದಡವನ್ನು ಮುಟ್ಟುವುದು ಕಾಲವಶ, ಅಷ್ಟೆ. Leader (ನೇತಾ, ಮುಂದಾಳು) ಹುಟ್ಟುವವನೇ ಹೊರತು ಅವನನ್ನು ತರಪೇಯತ್ತು ಮಾಡಲಾಗುವುದಿಲ್ಲ. ಗೊತ್ತಾಯಿತೆ ನಿನಗೆ! ಮುಂದಾಳುತನವನ್ನು ಚಲಾಯಿಸತಕ್ಕವನು ಬಹಳ ಶಕ್ತನಾಗಿರಬೇಕು. ದಾಸಸ್ಯ ದಾಸಃ (ದಾಸನಿಗೆ ದಾಸನಾಗಿರಬೇಕು). ಸಾವಿರ ಮಂದಿಯನ್ನು ಅನುಸರಿಸಿ ನಡೆಯಬೇಕು ಆತನು. Jealousy (ಈರ್ಷ್ಯೆ), selfishness (ಸ್ವಾರ್ಥ ಪರತಾ) ಇವುಗಳ ನೆರಳು ಕೂಡ ಇರಕೂಡದು. ಆಗ ನೀನು Leader ಮುಂದಾಳು. ಮೊದಲನೆಯದು, by birth (ಹುಟ್ಟಿನ ಮೂಲಕ) ಎರಡನೆಯದು unselfishness (ನಿಸ್ವಾರ್ಥತೆ), ಆಗ Leader (ಮುಂದಾಳು) ಸಕಲವೂ ಸರಿಯಾಗಿ ಹೋಗುತ್ತದೆ, ಸಕಲವೂ ಸರಿಹೋಗುವದು. ಅವನು ಬಲೆ ಸರಿಯಾಗಿ ಬೀಸುತ್ತಾನೆ. ಹಾಗೆಯೇ ಸುತ್ತಿ ಎಳೆಯುತ್ತಾನೆ. "ವಯಮನುಸರಾಮಃ ವಯಮನುಸರಾಮಃ. ಪ್ರೀತಿಃ ಪರಮ ಸಾಧನಂ". (ನಾವು ಕೇವಲ ಆತನ ಪಾದಗಳನ್ನೇ ಅನುಸರಿಸೋಣ. ಪರಮ ಸಾಧನವಾವುದೆಂದರೆ ಪ್ರೀತಿ). ತಿಳಿಯಿತೇನು? Love conquers in the long run (ಕೊನೆಯಲ್ಲಿ ಪ್ರೀತಿಗೇ ಜಯವು). ಅಸಮಾಧಾನ ಪಟ್ಟರೆ ಕಾರ್ಯವಾಗದು. Wait, wait (ತಾಳು ತಾಳು) ಸಹನವು ಸಿದ್ಧಿಯಾದ ಫಲವನ್ನು ಕೊಡಲೇ ಬೇಕು.

ಎನ್ನೊಡಹುಟ್ಟಿದವನೇ! ನಾನು ಹೇಳುತ್ತೇನೆ ಕೇಳು! ಯಾವ ಯಾವುದು ಹೇಗೆಹೇಗೆ ಹೋಗುತ್ತದೆಯೋ ಹಾಗೆಹಾಗೆಯೇ ಬಿಡು. ಆದರೆ ಯಾವ form (ಬಾಹ್ಯಾನುಷ್ಠಾನಪದ್ಧತಿ) ಯೂ ಆವಶ್ಯಕವಾಗದಂತೆ ನೋಡಿಕೊ. Unity in variety (ಬಹುತ್ವದಲ್ಲಿ ಏಕತ್ವ) ಸಾರ್ವಜನೀನ ಭಾವಕ್ಕೆ ಯಾವ ತಡೆಯೂ ಬಾರದಂತೆ ನೋಡಿಕೋ. Every thing must be sacrificed for that one sentiment, universality if necessary (ಆವಶ್ಯಕತೆಬಿದ್ದರೆ 'ಸಾರ್ವಜನೀನತಾ' ಈ ಭಾವದ ರಕ್ಷಣಾರ್ಥವಾಗಿ ಸಮಸ್ತವನ್ನೂ ಬಿಟ್ಟು ಬಿಡತಕ್ಕದು). ನಾನು ಸಾಯಲಿ ಬದುಕಿರಲಿ, ನಾನು ಭಾರತಕ್ಕೆ ಹಿಂದುರಗಲಿ. ಹಿಂದಿರುಗದೇ ಹೋಗಲಿ, ನೀವು ವಿಶೇಷವಾಗಿ ಜ್ಞಾಪಕದಲ್ಲಿಡತಕ್ಕುದಾವುದೆಂದರೆ 'ಸಾರ್ವಜನೀನತೆ'. Perfect acceptance not toleration only, we preach and perform. Take care how you trample on the least rights of others. (ಪರಧರ್ಮ ದ್ವೇಷವನ್ನು ಮಾಡುವುದಿಲ್ಲವೆಂಬ ಭಾವ ಪ್ರಚಾರ ಮಾಡುವುದು ಮಾತ್ರವೇ ಅಲ್ಲ. ಸಕಲ ಧರ್ಮಗಳೂ ಸತ್ಯವೆಂಬುದನ್ನು ಸಂಪೂರ್ಣವಾಗಿ ಗ್ರಹಿಸಿ ಅದನ್ನು ಆಚರಣೆಯಲ್ಲಿಯೂ ತೋರಿಸುತ್ತೇವೆ. ಜೋಕೆ? ಇತರರ ಅತ್ಯಲ್ಪವಾದ ಹಕ್ಕಿನ ಮೇಲೆಯೂ ನಿನ್ನ ಕೈ ಹಾಕದಿರು.) ಆ ಸುಳಿಯಲ್ಲಿ ದೊಡ್ಡ ದೊಡ್ಡ ಹಡಗುಗಳು ಮುಳುಗಿ ಹೋಗಿವೆ. ಸ್ವಾಮಿ ತಾಭಿಮಾನವನ್ನು ಳಿದ ಪೂರ್ಣ ಭಕ್ತಿಯನ್ನೀಗ ನಾವು ತೋರಿಸತಕ್ಕುದೆಂಬುದನ್ನು ಜ್ಞಾಪಕದಲ್ಲಿಡತಕ್ಕುದು. ಆತನ ಕೃಪಾ ಬಲದಿಂದ ಸಕಲವೂ ಸರಿಯಾಗಿ ನಡೆಯುವುದು........ಮುಂದಾಳಾಗಬೇಕೆಂದು ಸಕಲರಿಗೂ ಆಸೆ. ಆದರೆ ಮುಂದಾಳಾಗುವುದು ಹುಟ್ಟಿನ ಲಕ್ಷಣವೆಂಬುದನ್ನು ತಿಳಿಯದಿರೋಣವೇ ಇಷ್ಟು ಅನಿಷ್ಟಕ್ಕೆ ಕಾರಣ..............................

ನಮ್ಮ Matrons (ಮಾತೆಯರು) ಎಲ್ಲಿರೂ ಸೌಖ್ಯವಾಗಿದ್ದಾರೆಂಬುದು ನನ್ನ ಕೋರಿಕೆ. Mother (ಮಾತುಶ್ರೀ) ಅವರೆಲ್ಲಿದ್ದಾರೆ?

ಅಂತಹ ಉದಾರ ಹೃದಯರಾದ ಸಹಸ್ರ ಮಾತೆಯರು ನಮಗೆ ಬೇಕು; ನಮಗೆಲ್ಲರಿಗೂ ಬೇಕು.

It is not at all necessary that all should have the same faith in our Lord as we have, but we want to unite all the powers of goodness against all the powers of evil (ನಮ್ಮ ಠಾಕೂರರವರಲ್ಲಿ (ಶ್ರೀ ರಾಮಕೃಷ್ಣ ದೇವರಲ್ಲಿ) ನಮಗೆ ಯಾವ ಬಗೆಯ ವಿಶ್ವಾಸವಿರುವುದೋ ಅದೇ ಪ್ರಕಾರದ ವಿಶ್ವಾಸವು ಇತರರಿಗೂ ಇರಬೇಕೆಂಬ ನಿಯಮವೇನೂ ಇಲ್ಲ. ಆದರೆ ಜಗತ್ತಿನಲ್ಲಿ ಕೆಡಕು ಮಾಡುವ ಸಮಗ್ರ ಶಕ್ತಿಯನ್ನೂ ಇದಿರಿಸುವುದಕ್ಕಾಗಿ ಕಲ್ಯಾಣವನ್ನುಂಟು ಮಾಡುವ ಸಮಗ್ರ ಶಕ್ತಿಯನ್ನೂ ಒಗ್ಗೂಡಿಸಬೇಕೆಂಬುದು ನಮ್ಮ ಇಚ್ಛೆ) ಸನ್ಯಾಸಿಗೂ ಗೃಹಸ್ಥನಿಗೂ ಭೇದವನ್ನೆಣಿಸದವನೇ ನಿಜವಾದ ಸನ್ಯಾಸಿ............ಈಗ ಬಂದಿರುವ ದೋಷವೇನೆಂದರೆ ಸನ್ಯಾಸಿಗಳಿಗಿರತಕ್ಕ ತಮ್ಮ ಆಶ್ರಮದ ಮೇಲಣ ಅಭಿಮಾನ ಮೊದಲು ಮೊದಲು ಏನೋ ಅದರಿಂದ ಪ್ರಯೋಜನವುಂಟಾದರೂ ಅವರು ಚನ್ನಾಗಿ ಬಲಿತಮೇಲೆ ಆ ಭಾವದ ಆವಶ್ಯಕತೆಯಿರದು.

ಒಂದು ಬಿಡುಗಾಸೂ ಕೈಯಲ್ಲಿಲ್ಲದ ಐದಾರು ಮಂದಿ ಹುಡುಗರು ಕಲೆತು ಆರಂಭಿಸಿದ ಕಾರ್ಯವು ಈಗ ಕ್ರಮವಿಡಿದು ಹೆಚ್ಚುಹೆಚ್ಚಾಗಿ ಬೆಳೆಯುತ ಹೋದರೆ, ಅದೇನು ಮೋಸವೋ ಅಲ್ಲವೇ ಈಶ್ವರೇಚ್ಛೆಯೋ! ಪ್ರಭುವಿನ ಇಚ್ಛೆಯಾಗಿರುವ ಪಕ್ಷಕ್ಕೆ ಪಕ್ಷಪಾತವನ್ನೂ ಈರ್ಷೆಯನ್ನೂ ಬಿಟ್ಟು ಒಗ್ಗೂಡಿ ಕಾರ್ಯವನ್ನು ನಡೆಯಿಸಿರಿ. ಏನು ನಾಚಿಕೆಗೇಡು! ನಾವು ಸ್ಥಾಪಿಸುವುದು ಸಾರ್ವಜನೀನ ಧರ್ಮ. ಅದು ಪಕ್ಷಾವಲಂಬನದಿಂದಾಗುವುದೇನು?

ಓರ್ವನು ದೊಡ್ಡವನಾಗಬೇಕೆಂದು ನೆನೆದ ಮಾತ್ರಕ್ಕೆ ತಾನು ದೊಡ್ಡವನಾಗಲಾರನೆಂಬುದನ್ನೂ, ಆತನು (ಭಗವಂತನು) ಯಾರನ್ನು ಕೈ ನೀಡಿ ಮೇಲಕ್ಕೆತ್ತುವನೋ ಆತನು ಮಾತ್ರವೇ ಮೇಲಕ್ಕೇಳುವನೆಂಬುದನ್ನೂ ಆತನು ಯಾರನ್ನು ಕೆಳಕ್ಕೆ ತಳ್ಳುವನೋ ಅವನು ಬೀಳುವನೆಂಬು

ದನ್ನೂ ಸಕಲರೂ ಒಂದು ದಿವಸ ಒಂದು ನಿಮಿಷ ಮಾತ್ರ ತಿಳಿಯುವರಾದರೆ ಆಗ ಸಕಲವಾದ ತೊಂದರೆಗಳೂ ಅಡಗುವುವು. ಆದರೆ "ಅಹಂ" "ಪೊಳ್ಳು ಅಹಂ" ಇರುವದಲ್ಲವೆ? ಬೆರಳನ್ನು ಅಳ್ಳಾಡಿಸಲು ಶಕ್ತಿಯಿಲ್ಲ ಅದಕ್ಕೆ. ಆದರೆ ಅದು "ನಾನು ಯಾರನ್ನೂ ಮೇಲಕ್ಕೇಳಗೊಡಿಸುವುದಿಲ್ಲ" ವೆಂದು ಹೇಳಿದರೆ ಆಪರಿ ಆಗುವುದೇನು? ಈ ಹೊಟ್ಟೆಯ ಕಿಚ್ಚು, ನಾಲ್ವರು ಸೇರಿ ಕಾರ್ಯವಮಾಡುವ ಶಕ್ತಿಯ ಅಭಾವವೀಗ ಗುಲಾಮ ಜಾತಿಯವರ ಸ್ವಭಾವ. ನಾವು ಅದನ್ನು ಬಿಟ್ಟುಬಿಡುವ ಪ್ರಯತ್ನವನ್ನು ಮಾಡುವುದು ಉಚಿತ. ಭಯಾನಕವಾದ ಈರ್ಷೆಯಿದೆಯಲ್ಲಾ ಅದು ನಮ್ಮ ವಿಶೇಷ ಲಕ್ಷಣ, ವಿಶೇಷವಾಗಿ ಬಂಗಾಳಿಯವರ ಲಕ್ಷಣ. ಹಿಂದೂಗಳಲ್ಲೆಲ್ಲಾ ನಾವೀಗ ಎಲ್ಲರಿಗಿಂತ ಕೆಲಸಕ್ಕೆ ಬಾರದವರು, ಅತ್ಯಂತ ಮೂಢ ಭಕ್ತಿಯುಳ್ಳವರು, ದೊಡ್ಡ ಹೇಡಿಗಳು, ಅತ್ಯಂತ ಕಾಮುಕರು.

ನಾಲ್ಕಾರು ಅನ್ಯದೇಶಗಳಿಗೆ ಹೋಗಿ ನೋಡಿದುದೇ ಆದರೆ ಇದು ಚನ್ನಾಗಿ ಮನದಟ್ಟಾಗುವುದು. ಈ ವಿಷಯದಲ್ಲಿ ನಮಗೆ ಸದೃಶರಾದವರಾರೆಂದರೆ ಅಮೇರಿಕದಲ್ಲಿ ಸ್ವಾಧೀನತೆ ಪಡೆದ Negroes (ಕಪ್ಪು ಸಿದ್ದಿಗಳು). ಅವರಲ್ಲಿ ಯಾವನಾದರೂ ಕೊಂಚ ತಲೆ ಎತ್ತಿದರೆ ಸಾಕು, ಎಲ್ಲರೂ ಒಡನೆಯೇ ಕಲೆತು, ಅವನಿಗೆ ವಿರೋಧವಾಗಿ ಬಿಳಿಯವರೊಡನೆ ಸೇರಿಕೊಂಡು ಅವನನ್ನು ನೆಲಕ್ಕುರುಳಿಸುವ ಪ್ರಯತ್ನವನ್ನು ಮಾಡುವರು. ನಾವೂ ಅಂತಹವರ ಗೋಷ್ಠಿಗೆ ಸೇರಿದವರು. ಒಂದು ಹೆಜ್ಜೆ ಇಡಲು ಶಕ್ತಿಯಿಲ್ಲದ ಕೀಟಗಳು. ಬಿಕ್ಕದ ಸೆರಗನ್ನೊಡ್ಡುತ, ಇಸ್ಪೇಟಾಡುತ, ಗಂಡಾಗುಂಡಿ ಜೀವನವನ್ನು ಮಾಡುವ ಕೀಟಗಳು. ತಮ್ಮಲ್ಲಿ ಯಾರಾದರೂ ಬಂದು ಕಾಲು ಮುಂದಿಟ್ಟರೆ ಎಲ್ಲರೂ ಅವನ ಹಿಂದೆ ಪೆಟ್ಟು ತಿಂದ ನಾಯಿಗಳಂತೆ ಕುಂಯಿ ಕುಂಯಿ ಕೂಗುತ ಹೋಗುವರು. ಏನೇ ಆಗಲಿ, ಏನೇ ಖರ್ಚಾಗಲಿ, ಏನೇ ಕಷ್ಟ ಒದಗಲಿ ನಮ್ಮಲ್ಲಿ ಅಂತಹದು ತಲೆದೋರದಂತೆ ನೋಡಿಕೊಳ್ಳಬೇಕು. ನಾವು ಹತ್ತು ಮಂದಿ ಇರಲಿ, ಇಬ್ಬರಿರಲಿ ಸಾಕು. ಅಷ್ಟೇ ಮಂದಿ ಸರ್ವಾಂಗ ಸಂಪೂರ್ಣ ಚಾರಿತ್ರವುಳ್ಳವರಾಗಿರಬೇಕು. "ಭಗವಂತನು ನಮ್ಮ ಹೊಟ್ಟೆಯಪಾಡನ್ನು ನೋಡಿಕೊಳ್ಳುವನೇ" ಎಂದು ತಂದೆಯನ್ನು ಕೇಳುವುದು ಸರಿಯಲ್ಲ.

ಈಶ್ವರನು ಹಾಗೆ ಮಾಡುವವನೇ ಸರಿ. ಆ ವಿಷಯದಲ್ಲಿ ನೀನು ನಿಶ್ಚಿಂತನಾಗಿರು. ........ಆತನ ಹೆಸರನ್ನು ರಾಜಪುತಾನ, ಪಂಜಾಬು, ವಾಯುವ್ಯ ಪ್ರಾಂತ್ಯ, ಮದರಾಸು ಮುಂತಾದ ಸ್ಥಳಗಳಲ್ಲಿ ಹರಡಬೇಕು. ರಾಜಪುತಾನದಲ್ಲಿ ನಿಜವಾಗಿಯೂ ಹರಡಬೇಕು. ಏಕೆಂದರೆ "ಪ್ರಾಣ ಹೋದರೂ ಆಡಿದ ಮಾತಿಗೆ ತಪ್ಪದಿರುವುದು ರಘುವಂಶದವರ ಪದ್ಧತಿ ಯಾವಾಗಲೂ" ಎಂದು ಹೇಳಬಲ್ಲವರು ಈಗಲೂ ಇದ್ದಾರೆ.

ಪಕ್ಷಿಯು ಮೇಲೆ ಮೇಲೆ ಹಾರುತ ಯಾವ ಸ್ಥಳದಿಂದ ಪರಮ ಶಾಂತಿಯೊಡನೆ ಕೆಳಗೆ ನೋಡಲಾಗುವುದೋ ಅಂತಹ ಸ್ಥಳವನ್ನು ಸೇರುತ್ತದೆ. ನೀನು ಅಂತಹ ಸ್ಥಳವನ್ನು ಮುಟ್ಟಿದ್ದೀಯೇನಯ್ಯಾ? ಅಂತಹ ಸ್ಥಳವನ್ನು ಆಶ್ರಯಿಸದವನಿಗೆ ಇತರರಿಗೆ ಉಪದೇಶಮಾಡುವ ಅಧಿಕಾರವಾವುದೂ ಇಲ್ಲ. ಕೈಕಾಲುಗಳನ್ನಳ್ಳಾಡಿಸದೆ ಸುಮ್ಮನಿದ್ದುಕೊಂಡು ಹೊಳೆಯೊಡನೆ ತೇಲಿಕೊಂಡು ಹೋಗು. ನೀನೆಲ್ಲಿಗೆ ಹೋಗಬೇಕೋ ಅಲ್ಲಿಗೆ ಖಂಡಿತವಾಗಿಯೂ ಹೋಗುವೆ.

ಇಲ್ಲಿ ಚಳಿ ಕ್ರಮೇಣ ಕಡಮೆಯಾಗುತ್ತಿದೆ. ಇನ್ನು ನಾನು ಚಳಿಗಾಲವನ್ನು ಕಳೆದ ಹಾಗೆಯೇ. ಈ ದೇಶದಲ್ಲಿ ಚಳಿಗಾಲದಲ್ಲಿ ಆದ್ಯಂತ ದೇಹವೂ ವಿದ್ಯುದ್ಭರಿತವಾಗುತ್ತದೆ. ಒಬ್ಬನ ಕೈ ಹಿಡಿದು ಅಳ್ಳಾಡಿಸಿದರೆ Shock (ಧಕ್ಕು) ಉಂಟಾಗುತ್ತದೆ ಶಬ್ದದೊಡನೆ. ಕೈ ಬೆರಳಿನಿಂದ Gas (ಗ್ಯಾಸನ್ನು) ಹೊತ್ತಿಸಬಹುದು. ಇನ್ನು ಚಳಿಯ ವಿಷಯವಾಗಿ ನಿನಗಾಗಲೇ ಬರೆದಿದ್ದೇನೆ.......ನಾನು ಈ ದೇಶದಲ್ಲೆಲ್ಲಾ ದೌಡು ಹೊಡೆಯುತ್ತಿದ್ದೇನೆ. ಆದರೆ ಷಿಕಾಗೋ ಈಗ ನನ್ನ "ಮಠ". ಸಂಚಾರವನ್ನು ಮುಗಿಸಿಕೊಂಡು ನಾನು ಯಾವಾಗಲೂ ಅಲ್ಲಿಗೆ ಬಂದು ಸೇರುತ್ತೇನೆ. ಈಗ ನನ್ನ ಸಂಚಾರ ಪೂರ್ವ ಮುಖವಾಗಿ. ದೋಣಿ ಎಂದು ಕರೆಸೇರುವುದೋ ಅದು ಆತನಿಗೆ ಗೊತ್ತು...............

..........ಅವರು ಹೇಗಿದ್ದಾರೆ? ಅವರಿಗೆ ನಿನ್ನಲ್ಲಿ ಅದೇ ಬಗೆಯ ಪ್ರೀತಿಯುಂಟೆ? ಬಿ....ಅವರು ಹೇಗಿದ್ದಾರೆ? ಏನುಮಾಡುತ್ತಿದ್ದಾರೆ? ನೀನು ಅವರನ್ನು ಹೋಗಿ ನೋಡುತ್ತೀಯೋ? ಅವರಲ್ಲಿ ನಿನಗೆ ಶ್ರದ್ಧಾಭಕ್ತಿಗಳಿಗುವುವೆ? ಎನ್ನ ಒಡಹುಟ್ಟಿದವನೇ, ಹೌದಯ್ಯಾ! ಸನ್ಯಾ

ಸಿಗೂ ಗೃಹಸ್ಥನಿಗೂ ವ್ಯತ್ಯಾಸವಿರುವುದು ಸುಳ್ಳು. 'ಮೂಕಂ ಕರೋತಿ ವಾಚಾಲಂ' ಇತ್ಯಾದಿ. ಎನ್ನ ಸಖನೇ! ಯಾರಲ್ಲಿ ಏನಿದೆ ಎಂಬುದನ್ನು ಕಂಡು ಹಿಡಿಯುವುದು ಕಷ್ಟ. ಅವರು (ಶ್ರೀ ರಾಮಕೃಷ್ಣ ಪರಮಹಂಸರು) ಅವರನ್ನು ಕೊಂಡಾಡಿದ್ದಾರೆ. ಆದುದರಿಂದ ಅವರು ಪೂಜ್ಯರು. ಇಷ್ಟು ನೋಡಿ ಕೇಳಿದ್ದರೂ ನಿನಗೆ ನಂಬಿಕೆಯಿಲ್ಲದಿದ್ದರೆ ಛೀ! ಹೋಗು? ಆತನಿಗೆ ನಿನ್ನ ಮೇಲೆ ಪ್ರೀತಿಯುಂಟೆ? ನನ್ನ ಮನಃಪೂರ್ವಕವಾದ ಪ್ರೇಮವನ್ನೂ ಆತನಲ್ಲಿ ನನಗಿರುವ ಗೌರವವನ್ನೂ ದಯೆಯಿಟ್ಟು ತಿಳಿಸು ಆತನಿಗೆ. ಕ....ಅವರಿಗೆ ನನ್ನ ಪ್ರೀತಿಯನ್ನು ತಿಳಿಸು. ಆತನೊಬ್ಬ ಮಹಾತ್ಮನು. ....ಅವನು ಹೇಗಿದ್ದಾರೆ? ಶ್ರದ್ಧಾ ಭಕ್ತಿ ಏನಾದರೂ ಕೊಂಚವಿದೆಯೆ ಆತನಿಗೆ?...ಅವರಿಗೆ ನನ್ನ ಕುಶಲಪ್ರಶ್ನೆಯನ್ನು ತಿಳಿಸು. ....ಅವರು ಗಾಣದೊಡನೆ ಸರಿಯಾಗಿ ತಿರುಗುತ್ತಿದ್ದಾರೆಂಬುದು ನನ್ನ ಊಹೆ! ಕೊಂಚ ಸಹನವಿರಲಿ ಎಂದು ಆತನಿಗೆ ಹೇಳು. ಎಲ್ಲವೂ ಸರಿ ಬರುವುದು.

ಸರ್ವರಿಗೂ ನನ್ನ ಅಕಪಟ ಪ್ರೇಮ

ಸದಾ ನಿನ್ನ

ವಿವೇಕಾನಂದ.

ಷಿಕಾಗೋ.

೨೩ನೆಯ ಜೂನ್ ೧೮೯೪.

ರಾಯ ಬಹದ್ದೂರ್ ಅಂಬಿಲ್ ನರಸಿಂಹಯ್ಯಂಗಾರ್ಯರವರಿಗೆ.

ಪ್ರಿಯ ಮಹಾಶಯ,

ನನ್ನಲ್ಲಿ ತಾವು ತೋರಿಸುತ್ತಿರುವ ಅನುಗ್ರಹದ ಬಲದಿಂದ ತಮ್ಮ ಬಳಿ ವಿಶೇಷವಾದ ವಿಜ್ಞಾಪನೆಯೊಂದನ್ನು ಮಾಡಲು ಧೈರ್ಯಗೊಂಡಿದ್ದೇನೆ ನಾನು. ಮಿಸಸ್ ಪ....ಅವರು ಸಂಯುಕ್ತ ರಾಜ್ಯದ ಸ್ತ್ರೀ ಮಂಡಲಿಯಲ್ಲಿ ಸರ್ವ ಪ್ರಧಾನರು. ಮಹಾಮೇಳದಲ್ಲಿ ಸ್ತ್ರೀ ಸಭಾಪತಿಯಾಗಿದ್ದರು ಆಕೆ. ಒಟ್ಟು ಪ್ರಪಂಚದ ಸ್ತ್ರೀಯರಿಗೆ ಮೇಲ್ಮೆಯನ್ನುಂಟು ಮಾಡುವ ವಿಷಯದಲ್ಲಿ ಅವರು ಬಹಳವಾದ ಉತ್ಸಾಹದಿಂದ ತುಂಬಿದವರಾಗಿ ಸ್ತ್ರೀಯರ ಮಹಾಸಭೆಯೊಂದರ ಅಧ್ಯಕ್ಷರಾಗಿದ್ದಾರೆ. ಲೇಡಿ ಡಫ

ರಿನ್ ಅವರ ವಿಶೇಷ ಸ್ನೇಹಿತರು. ತಮ್ಮ ಐಶ್ವರ್ಯ ಪದವಿಗಳಿಗಾಗಿ ಯೂರೋಪಿನ ರಾಜರುಗಳಿಂದ ಸತ್ಕೃತರಾಗಿದ್ದಾರೆ. ಈ ದೇಶದಲ್ಲಿ ಅವ ರಿಂದ ವಿಶೇಷವಾಗಿ ಅನುಗ್ರಹೀತನಾಗಿದ್ದೇನೆ ನಾನು. ಅವರು ಚೀಣ, ಜಪಾನ್, ಸಯಾಂ, ಇಂಡಿಯ–ಈ ದೇಶಗಳ ಸಂಚಾರ ಹೊರಡುವವ ರಾಗಿದ್ದಾರೆ ಈಗ. ಭಾರತದಲ್ಲಿ ರಾಜಾಂಗಕ್ಕೆ ಸೇರಿದ ಗವರ್ನರುಗಳು ಮುಂತಾದ ಪದವೀಧರರು ಆಕೆಯನ್ನು ಸತ್ಕರಿಸಿ ಗೌರವಿಸುವುದೇನೋ ನಿಜ. ಆದರೆ ಸರ್ಕಾರದ ಇಂಗ್ಲೀಷು ಅಧಿಕಾರಿಗಳ ಸಾಹಾಯ್ಯವಿಲ್ಲದೆ ನಮ್ಮ ಸಮಾಜದ ಪರಿಚಯವನ್ನು ಮಾಡಿಕೊಳ್ಳಬೇಕೆಂಬುದರಲ್ಲಿ ಆಕೆಗೆ ವಿಶೇಷವಾದ ಕುತೂಹಲ. ಭಾರತದ ಸ್ತ್ರೀಯರ ಮೇಲ್ಮೆಗಾಗಿ ತಾವು ಮಾಡುತಲಿರುವ ಉದಾರ ಪ್ರಯತ್ನಗಳ ವಿಷಯವಾಗಿಯೂ, ಮೈಸೂರಿ ನಲ್ಲಿರುವ ತಮ್ಮ ಆಶ್ಚರ್ಯವಾದ ಮಹಿಳಾ ಪಾಠಶಾಲೆಯ ವಿಷಯವಾ ಗಿಯೂ ನಾನು ಅನೇಕಾವತಿ ಮಾತನಾಡಿದ್ದೇನೆ ಆಕೆಯೊಡನೆ. ಈಗ ನನ್ನ ಮನಸ್ಸಿನಲ್ಲಿರುವುದೇನೆಂದರೆ, ಭಾರತದಿಂದ ಈ ದೇಶಕ್ಕೆ ಬಂದವರಿಗೆ ಅವರು ಮಾಡಿರುವ ಆತಿಥ್ಯಕ್ಕೆ ಪ್ರತಿಯಾಗಿ ನಾವು ಇಂತಹ ವ್ಯಕ್ತಿಗಳಿಗೆ ಕೊಂಚ ಆತಿಥ್ಯವನ್ನು ಕೊಡುವುದು ನಮ್ಮ ಕರ್ತವ್ಯವೆಂಬುದು. ತಾವು ಅವರನ್ನು ಆದರಪೂರ್ವಕವಾಗಿ ಸತ್ಕರಿಸಿ ಅವರು ನಮ್ಮ ಸ್ತ್ರೀಯರ ನಿಜ ಸ್ಥಿತಿಯನ್ನು ಕೊಂಚಮಟ್ಟಿಗೆ ಅರಿಯಲು ಸಾಹಾಯ್ಯ ಮಾಡುವಿರೆಂ ಬುದು ನನ್ನ ಆಶೆ. ಮಿಷನರಿ ಅಲ್ಲ ಆಕೆ. ಹಾಗೇ ನೋಡಿದರೆ ಕ್ರಿಸ್ತ ಮತಾವಲಂಬಿಯೇ ಅಲ್ಲ. ಇದೇನೋ ನಿಜ. ಧರ್ಮಸಂಬಂಧವಾದ ವಿವಾದಗಳನ್ನೆಣಿಸದೆ ಈ ಜಗತ್ತಿನಲ್ಲೆಲ್ಲಾ ಸ್ತ್ರೀಯರ ಅವಸ್ಥೆಯನ್ನು ಮೇಲುಮಾಡುವ ಪ್ರಯತ್ನವನ್ನು ಕೈಕೊಳ್ಳಬೇಕೆಂಬುದು ಆಕೆಯ ಇಚ್ಛೆ. ತಾವು ಆಕೆಗೆ ಇಷ್ಟು ಸಾಹಾಯ್ಯ ಮಾಡಿದರೆ ಈ ದೇಶದಲ್ಲಿ ನನ್ನ ಕಾರ್ಯ ಕ್ಕೆ ಬಹಳ ಸಾಹಾಯ್ಯ ಮಾಡಿದಂತಾಗುತ್ತದೆ. ಈಶ್ವರನು ತಮ್ಮನ್ನು ಹರಸಲಿ.

ಭವದೀಯ ಚಿರಸ್ನೇಹಾಸ್ಪದ,

ವಿವೇಕಾನಂದ.

---